ಸಂಪುಟ ೧೭ ಸಂಚಿಕೆ ೪ ಡಿಸೆಂಬರ್ ೧೯೯೫

# ಬ್ಯಾಂಕಿಂಗ್ ಪ್ರಪಂಚ



ವಾರ್ಷಿಕ ಚಂದಾ : ರೂ. 20
ಆಜೀವ ಚಂದಾ : ರೂ. 200

## ಈ ಸಂಚಿಕೆಯಲ್ಲಿ



ಸಮನ್ವಯ ಸಮಿತಿ (ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳು)
ಭಾರತೀಯ ಸ್ಟೇಟ್ ಬ್ಯಾಂಕ್, ನಂ. ೨೨ ಜಯಚಾಮರಾಜೇಂದ್ರ ರಸ್ತೆ, ಬೆಂಗಳೂರು ೫೬೦ ೦೦೨

ಹಣ ಬ್ಯಾಂಕಿಂಗ್ ವಿಚಾರಗಳಿಗೆ ಮೀಸಲಾದ ತ್ರೈಮಾಸಿಕ

ಬ್ಯಾಂಕಿಂಗ್ ಪ್ರಪಂಚ

ಸಂಪುಟ ೧೬ ಡಿಸೆಂಬರ್ ೧೯೯೫ ಸಂಚಿಕೆ ೪

# ನಡು ನೀರಿನಲ್ಲಿ ಬ್ಯಾಂಕಿಂಗ್ ಸುಧಾರಣೆ

೧೯೯೫ ಮುಗಿಯುತ್ತಿದೆ. ಕೇಂದ್ರ ಸರ್ಕಾರ ಜಾರಿಗೆ ತಂದ ಹೊಸ ಆರ್ಥಿಕ ನೀತಿಯ ಐದನೆಯ ವರ್ಷ ನಡೆಯುತ್ತಿದೆ. ಇಡೀ ಅರ್ಥ ವ್ಯವಸ್ಥೆಯೇ ಬದಲಾವಣೆಗೆ ಒಳಪಟ್ಟಿದೆ. ಹಣಕಾಸು ವಲಯವೂ ಇದಕ್ಕೆ ಹೊರತಾಗಿಲ್ಲ.

ನಮ್ಮ ಹಣಕಾಸು ವ್ಯವಸ್ಥೆಯ ಸ್ಥಿತಿಗತಿಗಳನ್ನು ಅವಲೋಕಿಸಿ, ಅದರ ಸುಧಾರಣೆಯ ಬಗ್ಗೆ ಸಲಹೆ ನೀಡಲು ನೇಮಕಗೊಂಡಿದ್ದ ನರಸಿಂಹಂ ಸಮಿತಿಯ ಶಿಫಾರಸುಗಳ ಪ್ರಕಾರ ಈಗಾಗಲೇ ಈ ವಲಯದಲ್ಲಿ ಅನೇಕ ಬದಲಾವಣೆಗಳಾಗಿವೆ. ಬ್ಯಾಂಕಿಂಗ್ ವ್ಯವಸ್ಥೆಯ ಪುನರ್ರಚನೆಯಾಗಬೇಕು ; ಬ್ಯಾಂಕಿಂಗ್ ವಲಯದ ವಿಸ್ತರಣೆಯ ವಿಚಾರದಲ್ಲಿ ಉದಾರ ನೀತಿ ಜಾರಿಗೆ ಬರಬೇಕು ; ಸರ್ಕಾರಿ ವಲಯದ ಬ್ಯಾಂಕುಗಳ ಏಕಸ್ವಾಮ್ಯದ ಕೋಟೆಯನ್ನು ತೆರೆದು ಖಾಸಗಿ ವಲಯ ಬ್ಯಾಂಕುಗಳಿಗೂ ವಿದೇಶಿ ಬ್ಯಾಂಕುಗಳಿಗೂ ಪ್ರವೇಶ ದೊರಕಿಸಿ ಕೊಡಬೇಕು ; ಇನ್ನು ಮುಂದೆ ಯಾವುದೇ ಬ್ಯಾಂಕನ್ನು ರಾಷ್ಟ್ರೀಕರಿಸಬಾರದು ; ಬ್ಯಾಂಕುಗಳ ಬಂಡವಾಳತಳವನ್ನು ಹೆಚ್ಚಿಸಬೇಕು ; ಬಡ್ಡಿ ದರಗಳ ಮೇಲೆ ಯಾವುದೇ ಹಿಡಿತ ಬೇಡ ; ಇಡೀ ಬಡ್ಡಿ ದರ ವ್ಯವಸ್ಥೆಯೇ ವೈಜ್ಞಾನಿಕವಾದ್ದಾಗಿರಲಿ ; ಇಂಥವರಿಗೆ ಸಾಲ ನೀಡಿ, ಇಂಥವರಿಗೆ ಬೇಡ ಎಂದಾಗಲಿ, ಬ್ಯಾಂಕುಗಳು ಇಂಥಿಂಥ ರೀತಿಯಲ್ಲೇ ಹಣ ವಿನಿಯೋಜನೆ ಮಾಡಬೇಕೆಂದಾಗಲಿ ಕಟ್ಟುಪಾಡುಗಳು ಇರುವುದು ಬೇಡ ; ಬ್ಯಾಂಕುಗಳಿಗೆ ಬರಬೇಕಾಗಿರುವ ಅಗಾಧ ಬಾಕಿಗಳ ವಸೂಲಿಗೆ ತ್ವರಿತಕ್ರಮ ಜಾರಿಗೆ ಬರಬೇಕು ; ಅನುಮಾನದ ಹಾಗೂ ವಸೂಲಾಗವೆಂದು ಬಹುತೇಕ ಖಾತ್ರಿಯಾದ ಸಾಲಗಳನ್ನೆಲ್ಲ ಆಸ್ತಿಗಳೆಂದು ಬ್ಯಾಂಕುಗಳು ಪರಿಗಣಿಸಿ ಭ್ರಮಾವಿಲಾಸದಲ್ಲಿ ಓಲಾಡುವುದು ಶೋಚನೀಯವಾದ್ದರಿಂದ ಅಂಥ ಕಳಪೆ ಆಸ್ತಿಗಳನ್ನೆಲ್ಲ ಕಳೆಯಲು ವ್ಯವಸ್ಥೆ ರೂಪಿಸುವುದು ಅಗತ್ಯ; ಬ್ಯಾಂಕುಗಳಿಗೆ ಬರಬೇಕಾದ ಕರಡು ಸಾಲ ಹಾಗೂ ಅನುಮಾನ ಸಾಲಗಳನ್ನು ಸೋಡಿಯ ಮೇಲೆ ತೆಗೆದುಕೊಳ್ಳುವುದಕ್ಕಾಗಿ ಆಸ್ತಿ ಪುನರ್ರಚನಾ ನಿಧಿಯೊಂದರ ರಚನೆಯಾಗಲಿ; ಬ್ಯಾಂಕಿಂಗ್ ವ್ಯವಸ್ಥೆಯ ನಿಯಂತ್ರಣದ ಸಂಪೂರ್ಣ ಹೊಣೆ ರಿಸರ್ವ್ ಬ್ಯಾಂಕಿನದೇ ಆಗಿರಲಿ ; ಬಂಡವಾಳ ಮಾರುಕಟ್ಟೆಗೂ ಉದಾರ ನೀತಿಯ ಗಾಳಿ ಬೀಸಲಿ —ಎಂಬವು ಸ್ಥೂಲವಾಗಿ ನರಸಿಂಹಂ ಸಮಿತಿಯ ಶಿಫಾರಸುಗಳು.

೧೯೯೧ರ ಕೊನೆಯ ಭಾಗದಲ್ಲಿ ನರಸಿಂಹಂ ಸಮಿತಿ ವರದಿಗೆ ಸರ್ಕಾರ ಒಪ್ಪಿಗೆ ನೀಡಿತು. ಕೆಲವು ಬದಲಾವಣೆಗಳೊಡನೆ ಇದನ್ನು ಜಾರಿಗೊಳಿಸಲಾಗುತ್ತಿದೆ. ಈ ಶಿಫಾರಸುಗಳ ಕೆಲವು ಮುಖ್ಯಾಂಶಗಳನ್ನು ಕುರಿತಂತೆ ಯಾವುದೇ ಕ್ರಮ ತೆಗೆದುಕೊಂಡಿಲ್ಲ. ನರಸಿಂಹಂ ಸಮಿತಿಯ ಶಿಫಾರಸುಗಳ ಮೂರು ಪ್ರಮುಖ ಉದ್ದೇಶಗಳೆಂದರೆ, ಹೆಚ್ಚಿನ ಸ್ಪರ್ಧೆ, ಬ್ಯಾಂಕುಗಳ ಆರೋಗ್ಯಸಾಧನೆ ಮತ್ತು ದಕ್ಷತೆಗೆ ಅಗ್ರಮಾನ್ಯತೆ. ಮುಕ್ತ ಸ್ಪರ್ಧೆ ಇದ್ದಾಗ ಬ್ಯಾಂಕುಗಳು ಹೆಚ್ಚು ದಕ್ಷವಾಗಿ ಕೆಲಸ ಮಾಡುವಂತಾಗುವುದೆಂಬ ಕಾರಣದಿಂದ ಖಾಸಗಿ ಹಾಗೂ ವಿದೇಶಿ ಬ್ಯಾಂಕುಗಳಿಗೆ ಹೆಚ್ಚಿನ ಅವಕಾಶ ನೀಡಲಾಗಿದೆ. ಸುಮಾರು ಹನ್ನೆರಡು ಹೊಸ ಖಾಸಗಿ ಬ್ಯಾಂಕುಗಳು ಕಣವನ್ನು ಪ್ರವೇಶಿಸಿವೆ. ವಿದೇಶಿ ಬ್ಯಾಂಕುಗಳೂ ತಮ್ಮ ಚುಂಚಗಳನ್ನು ಚಾಚುತ್ತಿವೆ. ಅಗಾಧ ಸಂಖ್ಯೆಯ ಶಾಖೆಗಳನ್ನು ಅಷ್ಟೇನೂ ಲಾಭದಾಯಕವಾದ ಕ್ಷೇತ್ರಗಳಲ್ಲಿ ತೆರೆಯಬೇಕಾಗಿಲ್ಲದ ಇತರ ಬ್ಯಾಂಕುಗಳಂತೆ ಸರ್ಕಾರಿ ಬ್ಯಾಂಕುಗಳು ಕಡಮೆ ವೆಚ್ಚದಲ್ಲಿ ಹೆಚ್ಚು ದಕ್ಷವಾಗಿ ಕೆಲಸ ಮಾಡುವುದು ಎಷ್ಟರಮಟ್ಟಿಗೆ ಸಾಧ್ಯ ಎಂಬುದು ಪ್ರಶ್ನೆ. ಲಾಭವೇ ಪ್ರಧಾನ, ಅದರಿಂದಲೇ ಒಂದು ಬ್ಯಾಂಕಿನ ದಕ್ಷತೆಯ ಅಳತೆ ಎನ್ನುವುದಾದರೆ, ಸಮಾಜ ಕಲ್ಯಾಣ ಹಾಗೂ ಸಾಮಾಜಿಕ ಆರ್ಥಿಕ ಪ್ರಗತಿಯ ಸಾಧನೆಯನ್ನೂ ಒಂದು ಪ್ರಮುಖ ಹೊಣೆಯಾಗಿ ಉಳ್ಳ ಸರ್ಕಾರಿ ವಲಯ ಬ್ಯಾಂಕುಗಳು ಏನು ಮಾಡಬೇಕು ? ಪರಸ್ಪರ ವಿರುದ್ಧವೆನಿಸುವ ಈ ಎರಡು ಗುರಿಗಳ ಸಮನ್ವಯ ಹೇಗೆ ? ಈ ಪ್ರಶ್ನೆಗೆ ಯಾರೂ ಉತ್ತರ ಹೇಳುವವರಿಲ್ಲ. ಬ್ಯಾಂಕುಗಳು ಬಳುಕುವ ಮೈತಳೆದು ಲವಲವಿಕೆಯಿಂದ ಕೂಡಿದವವಾಗಿರಬೇಕೆನ್ನುವುದಾದರೆ, ಅವು ಆಧುನಿಕ ಯಂತ್ರ ತಂತ್ರ ಗಣಕ ವ್ಯವಸ್ಥೆಯನ್ನು ಹೊಂದಿ ಕ್ಷಿಪ್ರಾತಿಕ್ಷಿಪ್ರವಾಗಿ ಸೇವೆ ಸಲ್ಲಿಸಬೇಕಾಗುತ್ತದೆ. ಆದರೆ ದೂರ ದೂರದ ಹಳ್ಳಿಗಳಲ್ಲಿ ಗೆಲ್ಗಂಬಗಳಂತೆ ನಿಲ್ಲಿಸಲಾದ ಶಾಖೆಗಳಿಗೆಲ್ಲ ಇದನ್ನು ವಿಸ್ತರಿಸುವುದು ಹೇಗೆ ? ಇದಕ್ಕೆ ಎಷ್ಟು ವೆಚ್ಚ ? ಈ ಆಧುನಿಕ ವ್ಯವಸ್ಥೆಯ ಒಂದು ಫಲವೆಂದರೆ, ಹೆಚ್ಚಿನ ತರಬೇತಿ ಪಡೆದ, ಕಡಮೆ ಸಂಖ್ಯೆಯ ಸಿಬ್ಬಂದಿಯ ಸೇವೆ. ಹಾಗಾದರೆ ಬ್ಯಾಂಕುಗಳನ್ನು ನಂಬಿದ ಅಗಾಧ ಸಿಬ್ಬಂದಿಯ ಭವಿಷ್ಯವೇನು ? ಹಣ ಕೊಟ್ಟು ಕೈ ಕುಲುಕಿ ಹಲವರಿಗೆ ಮನೆಯ ದಾರಿ ತೋರಿಸುವುದೆ ? ಅನಾರ್ಥಿಕವಾದ ಶಾಖೆಗಳನ್ನು ಮುಚ್ಚುವುದೆ ? ಇಂಥ ಹಲವಾರು ಪ್ರಶ್ನೆಗಳಿಗೆ ಸಮರ್ಪಕವಾದ ಉತ್ತರವಿನ್ನೂ ದೊರಕಿಲ್ಲ.

ಇಂಥವರಿಗೆ ಸಾಲ ಕೊಡಿ, ಇದಿದಕ್ಕಾಗಿ ಸಾಲ ಕೊಡಿ ಎಂಬ ನಿರ್ದೇಶ ಈಗಲೂ ಮುಂದುವರಿದೇ ಇದೆ. ಇದನ್ನು ಬಿಡುವಂತಿಲ್ಲ. ಆದರೆ ಆದ್ಯತಾ ವಲಯದ ವ್ಯಾಖ್ಯೆ ವಿಸ್ತಾರವಾಗಿದೆ. ಸಾಲದ ಮೇಲಣ ಬಡ್ಡಿ ದರಗಳ ಮೇಲಣ ಹಿಡಿತ ಒಂದಿಷ್ಟು ಸಡಿಲ ಗೊಂಡಿದೆ. ಎರಡು ಲಕ್ಷ ರೂಪಾಯಿಗಳನ್ನು ಮೀರಿದ ಸಾಲಗಳ ಮೇಲೆ ಎಷ್ಟು ಬಡ್ಡಿ ದರ ವಿಧಿಸಬೇಕೆಂಬುದನ್ನು ಬ್ಯಾಂಕುಗಳ ವಿವೇಚನೆಗೆ ಬಿಡಲಾಗಿದೆ. ಬ್ಯಾಂಕುಗಳು ಯಾವ ನಿಟ್ಟಿನಲ್ಲಿ ಎಷ್ಟು ವಿನಿಯೋಜಿಸಬೇಕೆಂಬ ನಿಯಮ ಸ್ವಲ್ಪಮಟ್ಟಿಗೆ ಸಡಿಲವಾಗಿದೆ. ಶಾಸನ ವಿಧಿಸಿದ ದ್ರವತ್ವ ಅನುಪಾತ ಸ್ವಲ್ಪ ಕಡಿಮೆಯಾಗಿದೆ. ಸರ್ಕಾರದ ಸಾಲಗಳಲ್ಲಿ ಬ್ಯಾಂಕುಗಳು ಹಣ ತೊಡಗಿಸಬೇಕೆಂಬ ಒತ್ತಡ ಇಳಿದಿದೆ. ಲಾಭ ತರದ ಆಸ್ತಿಗಳ ಪ್ರಮಾಣ ತಗ್ಗಿದೆ. ಬ್ಯಾಂಕು ಗಳ ಲಾಭಪ್ರದತೆ ಅಧಿಕವಾಗಿದೆ. ಬ್ಯಾಂಕುಗಳ ಸಾಲದ ಮೇಲಣ ಬಡ್ಡಿ ದರವನ್ನು ಮುಕ್ತಗೊಳಿಸಿದ್ದರಿಂದ ಠೇವಣಿಗಳ ಮೇಲೆ ಬಡ್ಡಿ ದರ ವಿಧಿಸುವುದಕ್ಕೂ ಬ್ಯಾಂಕುಗಳಿಗೆ ಹೆಚ್ಚಿನ ಸ್ವಾತಂತ್ರ್ಯ ನೀಡ ಲಾಗಿದೆ. ಈ ಕ್ಷೇತ್ರದಲ್ಲಿ ಸ್ಪರ್ಧೆಯ ಗಾಳಿ ಮಂದಮಂದವಾಗಿ ಬೀಸತೊಡಗಿದೆಯೆನ್ನಬಹುದು.

ಬ್ಯಾಂಕುಗಳ ಹಣಕಾಸು ಸ್ಥಿತಿ ಸುಧಾರಿಸುತ್ತಿದೆ. ೧೯೯೬ರ ಮಾರ್ಚ್ ವೇಳೆಗೆ ಬ್ಯಾಂಕುಗಳ ಬಂಡವಾಳ ಅವುಗಳ ನಷ್ಟಸಂಭಾವ್ಯ ಭಾರಿತ ಹೊಣೆಗಳ ಶೇ. ೮ರಷ್ಟಾದರೂ ಇರಬೇಕೆಂಬ ನಿಯಮ ವನ್ನು ಅನೇಕ ಬ್ಯಾಂಕುಗಳು ಸಾಧಿಸಿವೆ. ಆದರೂ ಹಲವು ದುರ್ಬಲ ಕೊಂಡಿಗಳಿವೆ. ಇವಕ್ಕೆ ಸರ್ಕಾರ ಒಳಲೆಯಿಂದ ಬಂಡವಾಳದ ಹಾಲನ್ನು ನೀಡುವ ಕೆಲಸ ಈಗ ಹಿಂದಕ್ಕೆ ಬಿದ್ದಿದೆ, ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು, ಚಿಕ್ಕದೊಡ್ಡ ಹಾಗೂ ಬಲಿಷ್ಠ ದುರ್ಬಲ ಸರ್ಕಾರಿ ಬ್ಯಾಂಕುಗಳು, ಖಾಸಗಿ ವಲಯದ ಬ್ಯಾಂಕುಗಳು, ವಿದೇಶಿ ಬ್ಯಾಂಕುಗಳು—ಮುಂತಾಗಿ ಕಿಕ್ಕಿರಿ ತುಂಬಿದ ಬ್ಯಾಂಕುಗಳೂ ಅವುಗಳ ಕಛೇರಿಗಳೂ ಯಾವ ಬಗೆಯಲ್ಲಿ ಸ್ಪರ್ಧೆ ನಡಸಿಯಾವು ? ಅವುಗಳ ಆಟದ ನಿಯಮಗಳು ಎಲ್ಲಕ್ಕೂ ಒಂದೇ ಸಮನಾಗಿವೆಯೆ ? ಇದನ್ನು ಯೋಚಿಸಬೇಕು.

ಬ್ಯಾಂಕುಗಳ ಮೇಲೆ ರಿಸರ್ವ್ ಬ್ಯಾಂಕ್ ಹಾಗೂ ಸರ್ಕಾರದ ಹಣಕಾಸು ಇಲಾಖೆಯ ಬ್ಯಾಂಕಿಂಗ್ ವಿಭಾಗ—ಇವೆರಡರ ಯಜ ಮಾನಿಕೆಯೂ ಮುಂದುವರಿದಿದೆ. ಭಾರತೀಯ ಬ್ಯಾಂಕುಗಳ ಸಂಘ ಈ ರಥದ ಮೂರನೆಯ ಚಕ್ರ. ಅನೇಕ ವೇಳೆ ಇದು ಸರ್ಕಾರದ ಆದೇಶದಂತೆ ನಡೆದುಕೊಂಡಿರುವುದೂ ಉಂಟು. ಬ್ಯಾಂಕುಗಳ ಎಲ್ಲ ಸ್ತರದ ಉದ್ಯೋಗಿಗಳನ್ನೂ ಒಂದೇ ರೀತಿಯಾಗಿ ನಡಸಿಕೊಳ್ಳುತ್ತಿಲ್ಲವೆಂಬ ಅಸಮಾಧಾನವೂ ಇದೆ. ಇವೆಲ್ಲದರ ನಡುವೆ ರಾಜಕೀಯ ಹಸ್ತಕ್ಷೇಪವೂ ಕಂಡೂ ಕಾಣದಂತೆ ಇದ್ದೇ ಇದೆ. ಸರ್ಕಾರಿ ಬ್ಯಾಂಕುಗಳ ವ್ಯವಸ್ಥಾಪಕವರ್ಗಕ್ಕೆ ಹೆಚ್ಚಿನ ಸ್ವಾತಂತ್ರ್ಯ ಈಗಲೂ ಇಲ್ಲ. ಒಡೆತನ ಮತ್ತು ನಿಯಂತ್ರಣಗಳನ್ನು ಪ್ರತ್ಯೇಕ ಗೊಳಿಸಿಲ್ಲ. ಒಟ್ಟಿನಲ್ಲಿ ಒಂದು ಬಗೆಯ ನನೆಗುದಿಯ ಸ್ಥಿತಿ ಉಂಟಾಗಿದೆ. ಈ ಅನಿಶ್ಚಿತತೆ ಒಳ್ಳೆಯದಲ್ಲ. ●

# ಬ್ಯಾಂಕುಗಳು ಮತ್ತು ಬ್ಯಾಂಕೇತರ ಹಣಕಾಸು ಕಂಪನಿಗಳು

ಬಿ. ಎಸ್. ಚಂದ್ರಶೇಖರ
ಭಾರತೀಯ ಸ್ಟೇಟ್ ಬ್ಯಾಂಕ್, ವಲಯ ಕಛೇರಿ, ಬೆಂಗಳೂರು

**ಬ್ಯಾಂಕುಗಳಿಗೆ ಈಚಿನ ವರ್ಷಗಳಲ್ಲಿ ಬ್ಯಾಂಕೇತರ ಹಣಕಾಸು ಕಂಪೆನಿಗಳು ತೀವ್ರ ಪ್ರತಿಸ್ಪರ್ಧಿಗಳಾಗಿ ಪರಿಣಮಿಸುತ್ತಿವೆ. ಬ್ಯಾಂಕುಗಳ ರೀತಿಯಲ್ಲೇ ವ್ಯವಹಾರ ನಡಸುತ್ತ, ಅವಕ್ಕಿಂತ ಹೆಚ್ಚಿನ ಸವಲತ್ತುಗಳನ್ನು ನೀಡುತ್ತಿರುವ ಈ ಸಂಸ್ಥೆಗಳಿಗೆ ಬ್ಯಾಂಕುಗಳಿಗಿರುವಂಥ ಹಲವು ನಿರ್ಬಂಧಗಳಿಲ್ಲ. ಇವುಗಳ ಮೇಲೆ ಹೆಚ್ಚಿನ ನಿಯಂತ್ರಣ ಅಗತ್ಯ.**

ಬ್ಯಾಂಕಿಂಗ್ ವಿನಿಯಮನ ಅಧಿನಿಯಮದಲ್ಲಿ 'ಬ್ಯಾಂಕಿಂಗ್ ಕಂಪನಿ' ಎಂದರೆ ಭಾರತದಲ್ಲಿ ಬ್ಯಾಂಕಿಂಗ್ ವ್ಯವಹಾರ ನಡೆಸುವ ಯಾವುದೇ ಕಂಪನಿ ಎಂದು ವ್ಯಾಖ್ಯಿಸಲಾಗಿದೆ [ಪ್ರಕರಣ 5 (ಸಿ)]. ಅಧಿನಿಯಮದ 5 (ಬಿ)ಯಲ್ಲಿ ಬ್ಯಾಂಕಿಂಗ್ ಎಂದರೇನೆಂದು ವಿವರಿಸಲಾಗಿದೆ. ಬ್ಯಾಂಕಿಂಗ್ ಎಂದರೆ 'ಸಾಲ ನೀಡುವ ಅಥವಾ ವಿನಿಯೋಜಿಸುವ ಉದ್ದೇಶದಿಂದ, ತಗಾದೆ ಮಾಡಿದಾಗ ಅಥವಾ ಇತರ ಸಂದರ್ಭಗಳಲ್ಲಿ ಮರುಪಾವತಿಯುಕ್ತವಾದ ಹಣದ ಠೇವಣಿಗಳನ್ನು ಸಾರ್ವಜನಿಕರಿಂದ ಸ್ವೀಕರಿಸುವುದು.'

ಕಂಪನಿಗಳ ಅಧಿನಿಯಮದ 3ನೇ ಪ್ರಕರಣದಲ್ಲಿ 'ಕಂಪನಿ'ಯ ವ್ಯಾಖ್ಯೆಯಿದ್ದು, ಈ ವ್ಯಾಖ್ಯೆಯ ಚೌಕಟ್ಟಿಗೆ ವಿದೇಶೀ ಕಂಪನಿಗಳೂ ಸೇರುತ್ತವೆ ಎಂದು ಕಂಪನಿ ಅಧಿನಿಯಮದ 591ನೇ ಪ್ರಕರಣ ಸ್ಪಷ್ಟಪಡಿಸುತ್ತದೆ.

ಭಾರತದಲ್ಲಿರುವ ಬ್ಯಾಂಕಿಂಗ್ ಕಂಪನಿಗಳು (ಈ ಲೇಖನದಲ್ಲಿ ಇವನ್ನು ಬ್ಯಾಂಕುಗಳು ಎಂದು ಸೂಚಿಸಲಾಗುತ್ತದೆ) ಇತರ ಅನೇಕ ರೀತಿಯ ಹಣಕಾಸು ಕಂಪನಿಗಳ ನಡುವೆ ಕಾರ್ಯ ನಿರ್ವಹಿಸುತ್ತಿವೆ. ಬ್ಯಾಂಕಿಂಗ್ ವ್ಯವಹಾರಗಳನ್ನೇ ಹೋಲುವಂಥ ಹಣಕಾಸು ವಹಿವಾಟುಗಳನ್ನು ನಡೆಸುವ, ಆದರೆ ಬ್ಯಾಂಕಿಂಗ್ ವಿನಿಯಮನ ಅಧಿನಿಯಮದ ವ್ಯಾಖ್ಯೆಯಂತೆ ಬ್ಯಾಂಕಿಂಗ್ ಕಂಪನಿ ಅಲ್ಲದ ಕಂಪನಿಗಳನ್ನು ಬ್ಯಾಂಕಿಂಗೇತರ ಅಥವಾ ಬ್ಯಾಂಕೇತರ (ನಾನ್-ಬ್ಯಾಂಕಿಂಗ್) ಹಣಕಾಸು ಕಂಪನಿಗಳು ಎನ್ನಲಾಗುತ್ತದೆ.

ಬ್ಯಾಂಕೇತರ ಹಣಕಾಸು ಕಂಪನಿಗಳು ವಿವಿಧ ರೀತಿಯವಾಗಿರಬಹುದು. ಸಾಲ ನೀಡುವ ಕಂಪನಿಗಳು, ವಿನಿಯೋಜನೆ ಮಾಡುವ ಕಂಪನಿಗಳು—ಇವು ಸಾಮಾನ್ಯ ಉದಾಹರಣೆಗಳು. ಚಿಟ್ ಫಂಡ್ ಕಂಪನಿಗಳು ಬ್ಯಾಂಕೇತರ ಹಣಕಾಸು ಕಂಪನಿಗೆ ಇನ್ನೊಂದು ರೀತಿಯ ಉದಾಹರಣೆ. ಎಲ್ಲ ಚೀಟಿ ಸಂಸ್ಥೆಗಳು 'ಚಿಟ್‌ಫಂಡ್ ಕಂಪನಿ'ಗಳೆನ್ನಿಸಿಕೊಳ್ಳುವುದಿಲ್ಲ. ಭಾರತದ ಕಂಪನಿಗಳ ಅಧಿನಿಯಮ 1956ರಲ್ಲಿ ವ್ಯಾಖ್ಯೆ ಮಾಡಿದಂತೆ ಈ ಸಂಸ್ಥೆಯು 'ಕಂಪನಿ' ಆಗಿರಬೇಕೆಂಬುದನ್ನು ಮರೆಯುವ ಹಾಗಿಲ್ಲ. ಯಂತ್ರೋಪಕರಣ ಮುಂತಾದ ಸಲಕರಣೆಗಳನ್ನು ಗುತ್ತಿಗೆಯ ಮೇಲೆ ನೀಡುವ ಗುತ್ತಿಗೆ ಕಂಪನಿಗಳು (ಲೀಸಿಂಗ್ ಕಂಪೆನಿ), ಬಾಡಿಗೆ ಕೊಳ್ಳಿಕೆ (ಹೈರ್-ಪರ್ಚೇಸ್) ಹಣಕಾಸು ಕಂಪನಿಗಳು ಕೂಡ ಕಳೆದ ದಶಕದಲ್ಲಿ ಬಹು ಸಂಖ್ಯೆಯಲ್ಲಿ ತಲೆಯೆತ್ತಿವೆ. ಕೇವಲ ಗೃಹ ನಿರ್ಮಾಣಕ್ಕಾಗಿ ಹಣಕಾಸು ಒದಗಿಸುವ ಕಂಪನಿಗಳೂ ಇವೆ. ಇವಲ್ಲದೆ ಇತರ ರೀತಿಯ ಬ್ಯಾಂಕೇತರ ಹಣಕಾಸು ಕಂಪನಿಗಳೂ ಉಂಟು.

ಕಳೆದ ಹದಿನೈದು ವರ್ಷಗಳಿಂದ ಹಣಕಾಸು ಕಂಪನಿಗಳ ಚಟುವಟಿಕೆಗಳಲ್ಲಿ ತೀವ್ರವೃದ್ಧಿಯಾಗಿದೆಯೆಂಬ ಸಂಗತಿ ತಿಳಿಯದ್ದೇನಲ್ಲ ಬ್ಯಾಂಕುಗಳು ಹಾಗೂ ಬ್ಯಾಂಕೇತರ ಕಂಪನಿಗಳೆರಡಕ್ಕೂ ಈ ಮಾತು ಅನ್ವಯಿಸುತ್ತದೆ. ಅಧಿಕ ಉದ್ಯೋಗಾವಕಾಶಗಳು, ಹೆಚ್ಚುತ್ತಿರುವ ಕುಟುಂಬದ ಆದಾಯ, ಯಾಂತ್ರೀಕರಣ—ಇವುಗಳ ಹಿನ್ನೆಲೆಯಲ್ಲಿ ಅಧಿಕವಾಗುತ್ತಿರುವ ಉಪಭೋಗಲಾಲಸೆ (ಕನ್ಸ್ಯೂಮರಿಸ್‌ಮ್)ಯಿಂದಾಗಿ ಹಣಕಾಸಿಗೆ ಬೇಡಿಕೆ ಹೆಚ್ಚುತ್ತಿದೆ. ಬ್ಯಾಂಕೇತರ ಹಣಕಾಸು ಸಂಸ್ಥೆಗಳ ಬೆಳವಣಿಗೆಯ ಸ್ಥೂಲ ಪರಿಚಯ ನೀಡಿ ಲಾಭಪ್ರದತೆಯ ದೃಷ್ಟಿಯಿಂದ ಬ್ಯಾಂಕುಗಳನ್ನೂ ಅವುಗಳನ್ನೂ ಹೋಲಿಸಿ ನೋಡುವುದು ಈ ಲೇಖನದ ಉದ್ದೇಶ.

ಬ್ಯಾಂಕ್ ಶಾಖೆಗಳ ಸಂಖ್ಯೆ ಅಗಾಧವಾಗಿಯೇ ಇದ್ದರೂ ಎಲ್ಲ ವರ್ಗಗಳ ಹಣಕಾಸು ಅಗತ್ಯಗಳನ್ನು ಪೂರೈಸುವುದು ಅವಕ್ಕೆ ಸಾಧ್ಯವಾಗದು. ಬಹುಕಾಲದಿಂದ ಅಸ್ತಿತ್ವದಲ್ಲಿರುವ ಬ್ಯಾಂಕೇತರ ಹಣಕಾಸು ಸಂಸ್ಥೆಗಳು ಅನೇಕರಿಗೆ ಬ್ಯಾಂಕುಗಳಿಗಿಂತ ಹೆಚ್ಚು ಪರಿಚಿತ. ಅಂಥ ಸಂಸ್ಥೆಗಳೊಂದಿಗೆ ವ್ಯವಹರಿಸುವುದು ಸುಲಭಸಾಧ್ಯ. ಬ್ಯಾಂಕುಗಳು ಶ್ರೀ ಸಾಮಾನ್ಯನಿಗೆ ಎಷ್ಟೇ ಹತ್ತಿರವೆಂದರೂ ಮಧ್ಯಮ, ಕೆಳ ಮಧ್ಯಮ ವರ್ಗದ ಅನೇಕರಿಗೆ ಇತರ ಸಂಸ್ಥೆಗಳ

ಲ್ಲಿಯೇ ಸುಲಭವಾಗಿ ಸಾಲ ದೊರೆಯುತ್ತದೆ. (ಈ ಸಾಲದ ವೆಚ್ಚ ಅಧಿಕ ಎಂಬ ಮಾತು ಬೇರೆ.) ಈಚಿನ ವರ್ಷಗಳಲ್ಲಿ ಮಧ್ಯಮ, ಕೆಳ ಮಧ್ಯಮ ವರ್ಗದ ಜನರಿಗೆ, ಏಕ ವ್ಯಕ್ತಿ ಒಡೆತನದ ಅಥವಾ ಸಣ್ಣ ಪುಟ್ಟ ಪಾಲುದಾರಿಕೆ ಸಂಸ್ಥೆಗಳಿಗೆ ಬ್ಯಾಂಕೇತರ ಹಣಕಾಸು ಸಂಸ್ಥೆಗಳ ನಂಟು ತಪ್ಪಿಲ್ಲ.

ಬ್ಯಾಂಕುಗಳು ಹಾಗೂ ಬ್ಯಾಂಕೇತರ ಹಣಕಾಸು ಕಂಪನಿಗಳ ನಡುವಣ ವ್ಯತ್ಯಾಸ ಏನೇ ಇದ್ದರೂ ಅವುಗಳ ಚಟುವಟಿಕೆಗಳಲ್ಲಿ ಸಾಕಷ್ಟು ಸಾಮ್ಯವಿದೆ ಎಂಬುದು ಸ್ಪಷ್ಟ. ಆದ್ದರಿಂದ ಈ ಕಂಪನಿಗಳು ಬ್ಯಾಂಕುಗಳಿಗೆ ಹಲವು ಕ್ಷೇತ್ರಗಳಲ್ಲಿ ಪೈಪೋಟಿ ಒಡ್ಡಲು ಸಾಧ್ಯ. ಮುಖ್ಯವಾಗಿ ಠೇವಣಿಗಳ ವಿಷಯದಲ್ಲಿ ಈ ಪೈಪೋಟಿ ಅಧಿಕ. ಬ್ಯಾಂಕುಗಳು ನೀಡುವುದಕ್ಕಿಂತ ಅಧಿಕ ಬಡ್ಡಿಯನ್ನು ಅವು ನೀಡುತ್ತವೆ. ಆದರೆ ಮುಖ್ಯವಾದ ಎರಡು ದೃಷ್ಟಿಗಳಿಂದ ಬ್ಯಾಂಕ್ ಹೆಚ್ಚು ಆಕರ್ಷಕವಾಗಿದೆ.

1 ದ್ರವತ್ವ : ಸ್ಥಿರ ಠೇವಣಿಗಳನ್ನು ಅವಧಿಗೆ ಮುನ್ನವೇ ಹಿಂಪಡೆದುಕೊಳ್ಳುವುದು ಅಥವಾ ಠೇವಣಿಗಳ ಮೇಲೆ ಶೇ. 75 ರಷ್ಟು ಸಾಲ ಪಡೆಯುವುದು ಬ್ಯಾಂಕುಗಳಲ್ಲಿ ತುಂಬ ಸುಲಭ.

2 ನಷ್ಟ ಸಂಭಾವ್ಯತೆ : ಬ್ಯಾಂಕ್ ಠೇವಣಿಗಳಲ್ಲಿ ವಿನಿಯೋಜಿಸಿದ ಹಣ ನಷ್ಟವಾಗುವ ಭೀತಿಯಿಲ್ಲ. ಬಹುತೇಕ ಪ್ರಮುಖ ಬ್ಯಾಂಕುಗಳು ಸರ್ಕಾರಿ ಕ್ಷೇತ್ರದವು ಹಾಗೂ ಬ್ಯಾಂಕ್ ಠೇವಣಿಗಳಿಗೆ ವಿಮೆ ಸೌಲಭ್ಯವಿದೆ. ಮೇಲೇರುತ್ತಿರುವ ಬಡ್ಡಿಯ ದರ ನೋಡಿ ಬೆರಗಾಗಿ ಕೆಲವು ಹಣಕಾಸು ಸಂಸ್ಥೆಗಳಲ್ಲಿ ವಿನಿಯೋಜಿಸಿದ ಹಣದ ಗಂಟು ಬಲೂನಿನಂತೆ ತೇಲಿ ಹೋದ ಉದಾಹರಣೆಗಳು ಅನೇಕ. ಇಷ್ಟಾದರೂ ಬಡ್ಡಿಯ ಆಕರ್ಷಣೆ ಠೇವಣಿದಾರರನ್ನು ಸೆಳೆಯುತ್ತಿದೆ.

ಬ್ಯಾಂಕುಗಳು ಭಾರತದ ರಿಸರ್ವ್ ಬ್ಯಾಂಕಿನ ನಿಯಂತ್ರಣಕ್ಕೆ ಒಳಪಡುವಂತೆ ಬ್ಯಾಂಕೇತರ ಹಣಕಾಸು ಕಂಪನಿಗಳೂ ರಿಸರ್ವ್ ಬ್ಯಾಂಕಿನ ನಿರ್ದೇಶಗಳಿಗೆ, ಹತೋಟಿಗೆ ಒಳಪಡುತ್ತವೆ. ಠೇವಣಿಗಳ ಮೇಲೆ ನೀಡಬಹುದಾದ ಬಡ್ಡಿ ದರವನ್ನು ರಿಸರ್ವ್ ಬ್ಯಾಂಕ್ ಮಿತಿಗೊಳಪಡಿಸಿದೆ. ಆದರೂ ವೈಯಕ್ತಿಕ ಠೇವಣಿದಾರರಿಗೆ ಬ್ಯಾಂಕೇತರ ಸಂಸ್ಥೆಗಳನ್ನು ಕುರಿತ ಮೋಹ ತಪ್ಪಿಲ್ಲ. ತಮ್ಮ ವಿನಿಯೋಜನೆಗೆ ತಕ್ಕ ಪ್ರತಿಫಲವನ್ನು ಬಯಸುವ ಅವರಿಗೆ ಬ್ಯಾಂಕುಗಳು ನೀಡುವ ಬಡ್ಡಿದರ ಏನೇನೂ ಆಕರ್ಷಕವಾಗಿಲ್ಲ ಎಂಬುದಂತೂ ನಿಜ. ಪರಸ್ಪರ ನಿಧಿಗಳು ಆರಂಭವಾದಾಗ ಅವುಗಳತ್ತ ಆಕರ್ಷಿತರಾದ ಠೇವಣಿದಾರರು ಕ್ರಮೇಣ ಭ್ರಮನಿರಸನ ಹೊಂದಿದರು. ವಿನಿಯೋಜನೆಯನ್ನು ವೃದ್ಧಿಸುವಲ್ಲಿ ಪರಸ್ಪರ ನಿಧಿಗಳು ಸೋಲುತ್ತಿವೆ. ಬ್ಯಾಂಕುಗಳ ಠೇವಣಿಗಳಲ್ಲಿ ವೈಯಕ್ತಿಕ ವಿಭಾಗದ ಠೇವಣಿಗಳ ಪ್ರಮಾಣ ಗಣನೀಯವಾದದ್ದು. ಆದ್ದರಿಂದ ಠೇವಣಿಗಳ ಸಂಬಂಧದಲ್ಲಿ ಬ್ಯಾಂಕೇತರ ಹಣಕಾಸು ಸಂಸ್ಥೆಗಳು ಬ್ಯಾಂಕುಗಳಿಗೆ ಒಡ್ಡುವ ಪೈಪೋಟಿ ಮುಂದುವರಿಯುವುದೆಂದು ಖಚಿತವಾಗಿ ನಂಬಬಹುದು.

ಬ್ಯಾಂಕೇತರ ಹಣಕಾಸು ಕಂಪನಿಗಳ ಸಂಬಂಧದಲ್ಲಿ ರಿಸರ್ವ್ ಬ್ಯಾಂಕ್ ಕೆಲವು ನಿರ್ದೇಶಗಳನ್ನು ಹೊರಡಿಸಿದೆ. ವಿವಿಧ ರೀತಿಯ ಕಂಪನಿಗಳು (ಉದಾ : ಬಾಡಿಗೆ ಕೊಳ್ಳಿಕೆ ಕಂಪನಿಗಳು, ವಿನಿಯೋಜನೆ ಕಂಪನಿಗಳು ಇತ್ಯಾದಿ) ಈ ನಿರ್ದೇಶಗಳಂತೆ ಸ್ವೀಕರಿಸಬಹುದಾದ ಠೇವಣಿಯ ಮೊತ್ತಗಳು ಹಾಗೂ ಠೇವಣಿಗಳ ಮೇಲೆ ನೀಡಬಹುದಾದ ಗರಿಷ್ಠ ಬಡ್ಡಿ ದರಗಳು ಒಂದು ಮಿತಿಗೆ ಒಳಪಟ್ಟಿರುತ್ತವೆ. ಹಾಗೆಯೇ ಈ ಕಂಪನಿಗಳ ಠೇವಣಿ ಅರ್ಜಿ ನಮೂನೆಗಳಲ್ಲಿ ಮತ್ತು ಜಾಹೀರಾತುಗಳಲ್ಲಿ ಠೇವಣಿಗಳಿಗೆ ವಿಧಿಸಲಾದ ಮಿತಿಯನ್ನೂ ಈಗಾಗಲೇ ಸ್ವೀಕರಿಸಿರುವ ಠೇವಣಿಗಳ ಮೊತ್ತವನ್ನೂ ಸೂಚಿಸಬೇಕಾಗುತ್ತದೆ. ಕಂಪನಿಗಳು ಗಳಿಸಿದ ಲಾಭ, ಘೋಷಿಸಿದ ಲಾಭಾಂಶ ಮತ್ತಿತರ ವಿವರಗಳನ್ನು ನೀಡಬೇಕಾಗುತ್ತದೆ. ಆದರೂ ಈ ವಿವರಗಳನ್ನು ಬಹಿರಂಗಪಡಿಸದಿರುವುದು ಸಾಮಾನ್ಯವಾಗಿದೆ.

ಬ್ಯಾಂಕೇತರ ಹಣಕಾಸು ಕಂಪನಿಗಳು ನೀಡಬಹುದಾದ ಬಡ್ಡಿದರ ಈ ಮೊದಲು ಶೇ. 14ರ ಮಿತಿಗೆ ಒಳಪಟ್ಟಿತ್ತು. 30-10-95 ರಿಂದ ಈ ಮಿತಿಯನ್ನು ರಿಸರ್ವ್ ಬ್ಯಾಂಕ್ ಶೇ. 15ಕ್ಕೆ ಏರಿಸಿದೆ.

ಈ ನಿರ್ದೇಶಗಳು ಕಂಪನಿಗಳ ಅಧಿನಿಯಮದ ಅಡಿಯಲ್ಲಿ 'ಕಂಪನಿ' ಎಂದು ನೋಂದಾಯಿತವಾದ ಬ್ಯಾಂಕೇತರ ಹಣಕಾಸು ಕಂಪನಿಗಳಿಗೆ ಅನ್ವಯವಾಗುವುದೇ ಹೊರತು ಉಳಿದ ಹಣಕಾಸು ಸಂಸ್ಥೆಗಳಿಗಲ್ಲ. ಅಂಥ ಅನೇಕ ಸಂಸ್ಥೆಗಳು ಕಂಪನಿ ಅಧಿನಿಯಮದಡಿ ನೋಂದಾಯಿತವಾಗದಿದ್ದರೂ 'ಕಂಪನಿ' ಎಂದೇ ಹೆಸರಿಟ್ಟುಕೊಂಡು ತಾವು ರಿಸರ್ವ್ ಬ್ಯಾಂಕಿನ ಎಲ್ಲ ನಿರ್ದೇಶಗಳನ್ನು ಕಟ್ಟುನಿಟ್ಟಾಗಿ ಪಾಲಿಸುತ್ತಿದ್ದೇವೆಂದು ಸ್ವಯಂ ಘೋಷಿಸಿಕೊಳ್ಳುತ್ತಾ ಅತಿ ಹೆಚ್ಚಿನ ಬಡ್ಡಿದರಗಳನ್ನೂ ಇತರ ಆಮಿಷಗಳನ್ನೂ ಠೇವಣಿದಾರರಿಗೆ ತೋರಿಸಿ ಆಕರ್ಷಿಸುತ್ತಿವೆ. "25,000 ರೂ. ಮೀರಿದ ಠೇವಣಿಗಳಿಗೆ ಶೇ. 33 ಬಡ್ಡಿ + 100 ಗ್ರಾಂ ಬೆಳ್ಳಿ", "50,000ರೂ. ಮೀರಿದ ಠೇವಣಿಗಳಿಗೆ ಶೇ. 35ಬಡ್ಡಿ + 5ಗ್ರಾಂ ಚಿನ್ನ" ಎಂಬ ಆಹ್ವಾನಗಳೊಂದಿಗೆ ಠೇವಣಿಗೆ ಕರೆ ನೀಡಿರುವ ಜಾಹೀರಾತುಗಳನ್ನು ಪತ್ರಿಕೆಗಳಲ್ಲಿ ಆಗಾಗ ನೋಡುತ್ತಿರುತ್ತೇವೆ. ನೋಂದಾಯಿತವಾಗದ ಕಂಪನಿಗಳೆಲ್ಲವೂ ವಿಶ್ವಾಸಾರ್ಹವಲ್ಲವೆಂದು ಹೇಳಲು ಸಾಧ್ಯವಾಗದಿದ್ದರೂ ಇಂಥ 'ಕಂಪನಿ'ಗಳಲ್ಲಿ ಹಣ ತೊಡಗಿಸುವವರು ಅತ್ಯಂತ ಜಾಗರೂಕರಾಗಿರಬೇಕು ಎಂದು ಎಚ್ಚರಿಸಲೇಬೇಕಾಗುತ್ತದೆ.

ಕಂಪನಿಯಾಗಿ ನೋಂದಾಯಿತವಲ್ಲದ ಹಣಕಾಸು ಸಂಸ್ಥೆಗಳು ಸ್ವೀಕರಿಸುವ ಠೇವಣಿಗಳ ಮೊತ್ತಕ್ಕೆ ಮಿತಿಯಿಲ್ಲದಿದ್ದರೂ ಅವುಗಳ ಸಂಖ್ಯೆಗೆ ರಿಸರ್ವ್ ಬ್ಯಾಂಕ್ ಮಿತಿ ವಿಧಿಸಿದೆ. ಇಂಥ ಖಾಸಗಿ 'ಕಂಪನಿ'ಗಳು, ಪಾಲುದಾರಿಕೆ ಸಂಸ್ಥೆಗಳು ಅಥವಾ ಏಕವ್ಯಕ್ತಿ ಸಂಸ್ಥೆಗಳು ಪ್ರತಿ ಪಾಲುದಾರ 25ಕ್ಕಿಂತ ಹೆಚ್ಚು ಸಂಖ್ಯೆಯ ಠೇವಣಿದಾರರಿಂದ (ಪಾಲುದಾರರ ಬಂಧುಗಳನ್ನು ಹೊರತುಪಡಿಸಿ) ಠೇವಣಿಗಳನ್ನು ಸ್ವೀಕರಿಸುವ ಹಾಗಿಲ್ಲ. ಎಂದರೆ, 'ಕಂಪನಿ'ಯಲ್ಲಿ 4 ಜನ ನಿರ್ದೇಶಕರು ಅಥವಾ ಪಾಲುದಾರರು ಇದ್ದರೆ 100ಕ್ಕಿಂತ

ಹೆಚ್ಚು ಠೇವಣಿದಾರರನ್ನು ಹೊಂದಿರುವಂತಿಲ್ಲ. ಅಲ್ಲದೆ ಯಾವುದೇ 'ಕಂಪನಿ'ಗೆ, ಪಾಲುದಾರರ ಬಂಧುಗಳನ್ನು ಹೊರತುಪಡಿಸಿ, 250ಕ್ಕಿಂತ ಹೆಚ್ಚು ಠೇವಣಿದಾರರು ಇರುವಂತಿಲ್ಲ. (ಏಕವ್ಯಕ್ತಿ ಸಂಸ್ಥೆಗಳಿಗೆ ಠೇವಣಿದಾರರ ಸಂಖ್ಯೆಯ ಗರಿಷ್ಠ ಮಿತಿ 25.)

ರಿಸರ್ವ್ ಬ್ಯಾಂಕಿನ 'ಹಣಕಾಸು ಕಂಪನಿಗಳ ಮೇಲುಸ್ತುವಾರಿ ಇಲಾಖೆ'ಯು ಹೆಚ್ಚಿನ ಬಡ್ಡಿದರ ನೀಡಿ ಠೇವಣಿ ಪಡೆಯುತ್ತಿರುವ ಕೆಲವು ಪ್ರಮುಖ ಸಂಸ್ಥೆಗಳ ಪಟ್ಟಿಯನ್ನು ಪ್ರಕಟಿಸಿ ಅವು ಕಂಪನಿ ಅಧಿನಿಯಮದಡಿ ನೋಂದಾಯಿತವಾಗಿಲ್ಲವೆಂದು ಸ್ಪಷ್ಟಪಡಿಸಿದೆ. ಅವುಗಳಲ್ಲಿ ಮುಖ್ಯವಾದ ಕೆಲವು ಸಂಸ್ಥೆಗಳೆಂದರೆ :

ಅನುಭವ ಫೈನಾನ್ಸ್ ಅಂಡ್ ಇನ್ವೆಸ್ಟ್‌ಮೆಂಟ್ಸ್,
ದಕ್ಷಿಣಾ ಫೈನಾನ್ಸ್,
ಈಶ್ವರಿ ಫೈನಾನ್ಸ್ ಅಂಡ್ ಇನ್ವೆಸ್ಟ್‌ಮೆಂಟ್ಸ್,
ಶರವಣ ಕ್ರೆಡಿಟ್ ಅಂಡ್ ಇನ್ವೆಸ್ಟ್‌ಮೆಂಟ್ಸ್,
ರಮೇಶ್ ಕಾರ್ ಫೈನಾನ್ಸ್ ಕಾರ್ಪೊರೇಷನ್.

ರಿಸರ್ವ್ ಬ್ಯಾಂಕಿನ ನಿರ್ದೇಶಗಳಂತೆ ಹಣಕಾಸು ಕಂಪನಿಗಳು ಠೇವಣಿ ಸಂಗ್ರಹಿಸಲು ಠೇವಣಿ ಮೊತ್ತದ ಶೇ. 2ರವರೆಗೆ ದಳ್ಳಾಳಿ ನೀಡಬಹುದು : ಒಂದು ವರ್ಷದವರೆಗಿನ ಠೇವಣಿಗಳಿಗೆ ಗರಿಷ್ಠ ಶೇ. 1 ; ಎರಡೂವರೆ ವರ್ಷಕ್ಕೆ ಮೇಲ್ಪಟ್ಟ ಠೇವಣಿಗಳಿಗೆ ಗರಿಷ್ಠ ಶೇ. 2.

**ಬ್ಯಾಂಕೇತರ ಹಣಕಾಸು ಕಂಪನಿಗಳ ಸಂಖ್ಯೆ**

ಎಂಬತ್ತರ ದಶಕದಲ್ಲಿ ಬ್ಯಾಂಕೇತರ ಹಣಕಾಸು ಕಂಪನಿಗಳ ಸಂಖ್ಯೆ ತೀವ್ರವಾಗಿ ಏರಿತು. ಈ ಏರಿಕೆ ಮುಂದುವರಿಯುತ್ತಿದೆ ಎಂದು ಸಮೀಕ್ಷೆಯಿಂದ ತಿಳಿದುಬಂದಿದೆ.

| | | ಡಿಸೆಂಬರ್ | ಮಾರ್ಚ್ |
|---|---|---|---|
| | 1981 | 1992 | 1993 |
| ಬ್ಯಾಂಕೇತರ ಹಣಕಾಸು ಕಂಪನಿಗಳ ಸಂಖ್ಯೆ | 7,063 | 31,744 | 38,000 |

1994–95ರಲ್ಲಿ ಇಂಥ 16,000 ಹೊಸ ಕಂಪನಿಗಳು ಕಂಪನಿ ನಿಯಮದಡಿ ನೊಂದಾಯಿತವಾಗಿವೆ. ಅಗಾಧವಾದ ಈ ಬೆಳವಣಿಗೆ ಆರೋಗ್ಯಕರ ಎಂದೇನೂ ಹೇಳುವಂತಿಲ್ಲ. ಇವುಗಳ ಪೈಕಿ ಸುಮಾರು 700 ಕಂಪನಿಗಳು ಮಾತ್ರ ಕ್ರಿಯಾಶೀಲವಾಗಿವೆ ಎಂದು ರಿಸರ್ವ್ ಬ್ಯಾಂಕಿನ ಸಮೀಕ್ಷೆ ತಿಳಿಸಿದೆ.

**ಸಾಲ ನೀಡಿಕೆ, ವಸೂಲಾತಿ**

ಭಾರತದ ಕೈಗಾರಿಕಾ ಉದರಿ ಮತ್ತು ವಿನಿಯೋಜನಾ ನಿಗಮವು (ಐ ಸಿ ಐ ಸಿ ಐ) ಬ್ಯಾಂಕೇತರ ಹಣಕಾಸು ಸಂಸ್ಥೆಗಳನ್ನು ಕುರಿತು ಈಚೆಗೆ ಒಂದು ಅಧ್ಯಯನ ನಡೆಸಿದೆ. ಈ ಅಧ್ಯಯನದಲ್ಲಿ ಬ್ಯಾಂಕು ಗಳ ಹಾಗೂ ಬ್ಯಾಂಕೇತರ ಹಣಕಾಸು ಸಂಸ್ಥೆಗಳ ನಡುವೆ ಹೋಲಿಕೆಯೂ ನಡೆದಿದ್ದು, ಬೆಳಕಿಗೆ ಬಂದಿರುವ ಕೆಲವು ಅಂಶಗಳು ಕುತೂಹಲಕಾರಿಯಾಗಿವೆ.

ಬ್ಯಾಂಕುಗಳಿಗೆ ಹೋಲಿಸಿದಂತೆ ಬ್ಯಾಂಕೇತರ ಹಣಕಾಸು ಸಂಸ್ಥೆಗಳು ಸಾಲದ ಅರ್ಜಿಗಳನ್ನು ತ್ವರಿತವಾಗಿ ವಿಲೇ ಮಾಡುತ್ತವೆ. ಮತ್ತು ಅಲ್ಲಿ ಮೇಲುಸ್ತುವಾರಿ ನಿಯಮಗಳು ಕಡಿಮೆ. ಬ್ಯಾಂಕುಗಳು ಮಾಡುವಂತೆ ವಿನಿಯೋಜನೆಗಳ ವಿವರವಾದ ಅಧ್ಯಯನ, ಸಂಕೀರ್ಣ ರೀತಿಯ ಸಾಲ ನಿರ್ಧಾರಣ ಮುಂತಾದ ಕ್ರಿಯೆಗಳಲ್ಲಿ ಅವು ತೊಡಗುವುದಿಲ್ಲ. ಹೀಗಾಗಿ ಬ್ಯಾಂಕೇತರ ಹಣಕಾಸುಸಂಸ್ಥೆಗಳು ಬ್ಯಾಂಕುಗಳಿಗಿಂತ ಹೆಚ್ಚಿನ ನಷ್ಟ ಸಂಭಾವ್ಯತೆಯನ್ನು ಸ್ವೀಕರಿಸಲು ಸಿದ್ಧವಾಗಿರುತ್ತವೆ.

ಇನ್ನೊಂದು ಅಂಶವೆಂದರೆ ಬ್ಯಾಂಕುಗಳ ಸಾಲವು ಬಹುತೇಕ (ಶೇ. 50ಕ್ಕಿಂತ ಅಧಿಕ) ಕಂಪನಿ ಸಾಲಗಾರರಿಗೆ. ಪ್ರತಿಯಾಗಿ ಬ್ಯಾಂಕೇತರ ಹಣಕಾಸು ಸಂಸ್ಥೆಗಳು ವ್ಯಕ್ತಿಗಳಿಗೆ ಹಾಗೂ ಪಾಲುದಾರಿಕೆ ಸಂಸ್ಥೆಗಳಿಗೆ ಹೆಚ್ಚಿನಂಶ ಸಾಲ ನೀಡುತ್ತಿವೆ. ಇಂಥ ಕಂಪನಿಗಳ ಸಾಲಗಾರರಿಗೆ ಸಾಲದ ಮೇಲಣ ಬಡ್ಡಿಯ ದರ ಹೆಚ್ಚಾದರೂ ಅದರ ಪರಿವೆಯಿಲ್ಲ ; ಸಾಲ ದೊರೆಯುವುದು ಮುಖ್ಯ.

ಬ್ಯಾಂಕೇತರ ಹಣಕಾಸು ಸಂಸ್ಥೆಗಳು ಸಾಮಾನ್ಯವಾಗಿ ಷೇರುಗಳ ರೂಪದಲ್ಲಿ, ಅನಾಗತ ದಿನಾಂಕದ ಚೆಕ್ಕುಗಳ ರೂಪದಲ್ಲಿ ಹೆಚ್ಚಿನ ಭದ್ರತೆಯನ್ನು ಪಡೆದುಕೊಳ್ಳುತ್ತವೆ. ಇದರಿಂದ ಸಾಲಗಳ ವಸೂಲಾತಿ ಶೀಘ್ರ ಮತ್ತು ಸುಲಭ. ಈ ಕಂಪನಿಗಳು ಬ್ಯಾಂಕುಗಳು ಮಾಡುವಂತೆ ವಸೂಲಿಗಾಗಿ ನ್ಯಾಯಾಲಯದಲ್ಲಿ ದಾವೆ ಹೂಡಿ ವರ್ಷಗಟ್ಟಲೆ ನ್ಯಾಯಾಲಯಕ್ಕೆ ತಿರುಗಾಡುವುದು ಅಪರೂಪ.

ಅಧ್ಯಯನದ ವರದಿಯಿಂದ ಇನ್ನೊಂದು ಸಂಗತಿ ತಿಳಿದು ಬಂದಿದೆ. ಬ್ಯಾಂಕುಗಳೂ ಗುತ್ತಿಗೆ ವ್ಯವಹಾರ ಮಾಡುತ್ತಿವೆಯಾದರೂ ಭಾರತೀಯ ಸ್ಟೇಟ್ ಬ್ಯಾಂಕ್ ಮತ್ತಿತರ ಕೆಲವು ಬ್ಯಾಂಕುಗಳನ್ನು ಹೊರತುಪಡಿಸಿ ಇತರ ಬ್ಯಾಂಕುಗಳು ಈ ದಿಶೆಯಲ್ಲಿ ಪ್ರಗತಿ ಸಾಧಿಸಿಲ್ಲ. ಬ್ಯಾಂಕೇತರ ಹಣಕಾಸು ಸಂಸ್ಥೆಗಳು ಶೀಘ್ರವಾಗಿ ನಿರ್ಧಾರ ಕೈಗೊಳ್ಳುವ ಸಾಮರ್ಥ್ಯ ಹೊಂದಿದ್ದು ಗುತ್ತಿಗೆ ವ್ಯವಹಾರದಲ್ಲಿ ತೀವ್ರ ಪ್ರಗತಿ ಸಾಧಿಸಿವೆ.

ಬ್ಯಾಂಕೇತರ ಹಣಕಾಸು ಸಂಸ್ಥೆಗಳು ಹೊಸ ಹೊಸ ಉತ್ಪನ್ನಗಳನ್ನು, ಸೇವೆಗಳನ್ನು ಗ್ರಾಹಕರಿಗೆ ನೀಡುತ್ತವೆ. ಅವುಗಳ ವಸೂಲಾತಿ ವಿಧಾನಗಳೂ ಬಡ್ಡಿ ವಿಧಿಸುವ ವಿಧಾನಗಳೂ ಹೊಸ ರೀತಿಯವಾಗಿರುತ್ತವೆ. ಒಳ್ಳೆಯ ಭದ್ರತೆಯನ್ನು ಪಡೆಯುವುದರ ಜೊತೆಗೆ ಅವು ಶೇ. 25ರ ಆಸುಪಾಸಿನ ಬಡ್ಡಿದರ ವಿಧಿಸುತ್ತವೆ. ಇದಲ್ಲದೆ ಮುಂಗಡ ಶುಲ್ಕವಾಗಿ ಸಾಲದಮೊತ್ತದಲ್ಲಿ ಶೇ. 2ರಷ್ಟು ಹಣವನ್ನು ಪಡೆಯುತ್ತವೆ. ಅನಾಗತ ದಿನಾಂಕದ ಚೆಕ್ಕುಗಳನ್ನು ಪಡೆದು ವಸೂಲಾತಿಯ ಹಾದಿಯನ್ನು ಸುಗಮಗೊಳಿಸುತ್ತವೆ. ಬ್ಯಾಂಕೇತರ ಹಣಕಾಸು ಕಂಪನಿಗಳಲ್ಲಿ ವಸೂಲಾತಿಯ ಪ್ರಮಾಣ ಅಧಿಕ. ಬ್ಯಾಂಕುಗಳಲ್ಲಿ ನಿಷ್ಕ್ರಿಯ ಸಾಲಗಳ ಪ್ರಮಾಣ ಶೇ. 20ಕ್ಕೂ ಅಧಿಕ. ಆದರೆ ಇತರ ಹಣಕಾಸು ಕಂಪನಿಗಳಲ್ಲಿ ಈ ಪ್ರಮಾಣ ಕೇವಲ

ಶೇ. 2 ಎಂಬ ಸಂಗತಿ ಗಮನಾರ್ಹವಾಗಿದೆ. ವಸೂಲಿಯ ಕೌಶಲ ವಷ್ಟೇ ಅಲ್ಲ. ಸಾಲ ನಿರ್ಧಾರಣದ ಕೌಶಲವೂ ಬ್ಯಾಂಕೇತರ ಹಣಕಾಸು ಸಂಸ್ಥೆಗಳಿಗೆ ಕರಗತವಾಗಿದೆ ಎನ್ನಿಸುತ್ತದೆ.

**ಲಾಭಪ್ರದತೆ**

ಉದರಿ ಮತ್ತು ವಿನಿಯೋಜನ ನಿಗಮವು ಹಣಕಾಸು ಕಂಪನಿಗಳ ಲಾಭಪ್ರದತೆಯನ್ನೂ ತುಲನಾತ್ಮಕವಾಗಿ ಅಧ್ಯಯನ ಮಾಡಿದೆ. ಆಯ್ದ 150 ಬ್ಯಾಂಕೇತರ ಹಣಕಾಸು ಕಂಪನಿಗಳನ್ನು ಈ ದೃಷ್ಟಿಯಿಂದ 73 ಬ್ಯಾಂಕುಗಳಿಗೆ ಹೋಲಿಸಲಾಗಿದೆ. ಈ ಬ್ಯಾಂಕುಗಳ ಪೈಕಿ 27 ಸರ್ಕಾರಿ ಕ್ಷೇತ್ರಕ್ಕೆ, 23 ಖಾಸಗಿಗೆ ಸೇರಿದ್ದು ; ಉಳಿದ 23 ವಿದೇಶಿ ಬ್ಯಾಂಕುಗಳು.

**ಒಟ್ಟು ಆದಾಯದಲ್ಲಿ ಬಡ್ಡಿ ಆದಾಯದ ಪಾಲು**

| | 91–92 | 93–94 |
|---|---|---|
| ಸರ್ಕಾರಿ ಕ್ಷೇತ್ರದ ಬ್ಯಾಂಕುಗಳು | ಶೇ. 88.9 | ಶೇ. 87.1 |
| ಖಾಸಗಿ ಕ್ಷೇತ್ರದ ಬ್ಯಾಂಕುಗಳು | ಶೇ. 89.2 | ಶೇ. 87.1 |
| ಬ್ಯಾಂಕೇತರ ಹಣಕಾಸು ಕಂಪನಿಗಳು | ಶೇ. 76.6 | ಶೇ. 83.9 |

ಈ ಅಂಕಿ ಅಂಶಗಳನ್ನು ಗಮನಿಸಿದಾಗ ಬ್ಯಾಂಕುಗಳಲ್ಲಿ ಬಡ್ಡೀತರ ಆದಾಯ ಹೆಚ್ಚುತ್ತಿದೆ ಎಂಬುದನ್ನೂ, ಬ್ಯಾಂಕೇತರ ಹಣಕಾಸು ಕಂಪನಿಗಳ ಬಡ್ಡೀತರ ಆದಾಯ ಇಳಿದಿದೆ ಎಂಬುದನ್ನೂ ತಿಳಿಯಬಹುದು. ಬ್ಯಾಂಕೇತರ ಕಂಪನಿಗಳ ಬಂಡವಾಳ ಮಾರುಕಟ್ಟೆ ವ್ಯವಹಾರಗಳು ಹೆಚ್ಚಾಗುತ್ತಿದ್ದರೂ ಅವುಗಳ ಒಟ್ಟು ವ್ಯವಹಾರದಲ್ಲಿ ಶುಲ್ಕಾಧಾರಿತ ಚಟುವಟಿಕೆಗಳ ಭಾಗ ಕಡಿಮೆಯಾಗಿರುವುದು ವಿಶೇಷ ಸಂಗತಿ.

**ಖರ್ಚು/ಆದಾಯ ಅನುಪಾತ**
**(ಒಟ್ಟು ಖರ್ಚು/ಒಟ್ಟು ಆದಾಯ)**

| | 91–92 | 93–94 |
|---|---|---|
| ಸರ್ಕಾರಿ ಕ್ಷೇತ್ರದ ಬ್ಯಾಂಕುಗಳು | 109.3% | 111.70% |
| ಖಾಸಗಿ ಬ್ಯಾಂಕುಗಳು | 97.0% | 94.50% |
| ಬ್ಯಾಂಕೇತರ ಹಣಕಾಸು ಸಂಸ್ಥೆಗಳು | 84.9% | 77.1% |

ಈ ಅಂಕಿಗಳಂತೂ ಸರ್ಕಾರಿ ಕ್ಷೇತ್ರದ ಬ್ಯಾಂಕುಗಳ ಖರ್ಚಿನ ವಿಷಯದಲ್ಲಿ ಗಾಬರಿ ಹುಟ್ಟಿಸುತ್ತವೆ. ಬ್ಯಾಂಕೇತರ ಹಣಕಾಸು ಸಂಸ್ಥೆಗಳ ಖರ್ಚು/ಆದಾಯ ಅನುಪಾತ ಸಾಕಷ್ಟು ಕಡಿಮೆಯಿರುವುದಷ್ಟೇ ಅಲ್ಲ, ಅದು ಶೇ. 84.9ರಿಂದ ಶೇ. 77.1ಕ್ಕೆ ಇಳಿದಿದೆ. ಸರ್ಕಾರಿ ಬ್ಯಾಂಕುಗಳನ್ನು ತೆಗೆದುಕೊಂಡರೆ ಅಲ್ಲಿ ಈ ಅನುಪಾತ ಶೇ. 100ಕ್ಕಿಂತ ಹೆಚ್ಚಾಗಿರುವುದಷ್ಟೇ ಅಲ್ಲ, ಎರಡು ವರ್ಷಗಳ ಅವಧಿಯಲ್ಲಿ ಈ ಅನುಪಾತ ಮತ್ತಷ್ಟು ಏರಿದೆ. ವ್ಯವಹಾರ ವೆಚ್ಚಗಳ ಅಗಾಧ ಏರಿಕೆಯಿಂದ ಸರ್ಕಾರಿ ಕ್ಷೇತ್ರದ ಬ್ಯಾಂಕುಗಳಿಗೆ ನಷ್ಟವಾಗಿರುವುದು ಗಮನಾರ್ಹ.

ಅಧ್ಯಯನದಲ್ಲಿ ಒಟ್ಟು ಖರ್ಚುಗಳಲ್ಲಿ ಸಂಬಳದ ಭಾಗ ಎಷ್ಟು ಎಂಬುದನ್ನು ವಿಶ್ಲೇಷಿಸಿ ನೋಡಲಾಗಿದೆ.

**ಸಂಬಳ/ಒಟ್ಟು ಖರ್ಚು ಅನುಪಾತ**

| | 1991–92 | 1993–94 |
|---|---|---|
| ಸರ್ಕಾರಿ ಕ್ಷೇತ್ರದ ಬ್ಯಾಂಕುಗಳು | 15.9% | 16 3% |
| ಖಾಸಗಿ ಕ್ಷೇತ್ರದ ಬ್ಯಾಂಕುಗಳು | 18.6% | 16.9% |
| ಬ್ಯಾಂಕೇತರ ಹಣಕಾಸು ಕಂಪನಿಗಳು | 2.9% | 3.8% |

ಹಣಕಾಸು ಕಂಪನಿಗಳಲ್ಲಿ ಸಂಬಳದ ಖರ್ಚು ತೀರಾ ಕಡಿಮೆ ಎನ್ನುವಷ್ಟಿದೆ. ಅಧ್ಯಯನದಿಂದ ಎರಡು ವಿಷಯಗಳಂತೂ ಸ್ಪಷ್ಟವಾಗುತ್ತವೆ. ಒಂದೆಡೆ ಹೆಚ್ಚುತ್ತಿರುವ ಹಣಕಾಸು ಕಂಪನಿಗಳ ಸಂಖ್ಯೆ ; ಇನ್ನೊಂದೆಡೆ ಏರುತ್ತಿರುವ ಬ್ಯಾಂಕುಗಳ ಖರ್ಚು— ಇದರ ಪರಿಣಾಮ ಊಹಿಸುವುದು ಕಷ್ಟವಲ್ಲ: ಬ್ಯಾಂಕುಗಳು ಮುಂಬರುವ ದಿನಗಳಲ್ಲಿ ಇತರ ಹಣಕಾಸು ಕಂಪನಿಗಳಿಂದ ಹೆಚ್ಚಿನ ಪೈಪೋಟಿ ಎದುರಿಸಬೇಕಾಗುತ್ತದೆ. ಬ್ಯಾಂಕುಗಳು ನೀಡುವ ಅನೇಕ ಆವಶ್ಯಕತೆಗಳನ್ನು ಈ ಕಂಪನಿಗಳೂ ನೀಡುತ್ತವೆ. ಅಧ್ಯಯನ ವರದಿಯ ಅಂತ್ಯದಲ್ಲಿ ಸೂಚಿತವಾಗಿರುವುದನ್ನೇ ಉಲ್ಲೇಖಿಸುವುದಾದರೆ—"ಬ್ಯಾಂಕುಗಳ ಮತ್ತು ಇತರ ಹಣಕಾಸು ಕಂಪನಿಗಳ ಕಾರ್ಯಭಾರದಲ್ಲಿನ ಒಂದೇ ವ್ಯತ್ಯಾಸವೆಂದರೆ ಇತರ ಹಣಕಾಸು ಕಂಪನಿಗಳು ತಮ್ಮವೇ ಆದ ಚೆಕ್‌ಗಳನ್ನು (ಗ್ರಾಹಕರ ಬಳಕೆಗೆ) ನೀಡುವಂತಿಲ್ಲ." ಈ ವ್ಯತ್ಯಾಸ ತೀರಾ ಚಿಕ್ಕದೆನ್ನಬಹುದಾದ್ದರಿಂದ ಪೈಪೋಟಿಯ ತೀವ್ರತೆಯನ್ನು ಊಹಿಸಿಕೊಳ್ಳಬಹುದು. ಇದೀಗ ರಿಸರ್ವ್ ಬ್ಯಾಂಕು ಬ್ಯಾಂಕೇತರ ಹಣಕಾಸು ಕಂಪನಿಗಳು ಸ್ವೀಕರಿಸುವ ಠೇವಣಿಗಳ ಮೇಲಿನ ಬಡ್ಡಿದರವನ್ನು ಶೇ. 14ರಿಂದ ಶೇ. 15ಕ್ಕೆ ಏರಿಸಿರುವುದರಿಂದ ಪೈಪೋಟಿ ಮತ್ತಷ್ಟು ಪುಟಗೊಳ್ಳುವುದೆಂದು ನಿರೀಕ್ಷಿಸಬೇಕು.

ಇತರ ಕಂಪನಿಗಳು ರಿಸರ್ವ್ ಬ್ಯಾಂಕಿನ ನಿಯಂತ್ರಣಕ್ಕೆ ಒಳಪಟ್ಟಿದ್ದರೂ ಬ್ಯಾಂಕುಗಳಿಗಿದ್ದಷ್ಟು ತೀವ್ರ ನಿಯಂತ್ರಣ ಈ ಕಂಪನಿಗಳಿಗಿಲ್ಲ. ಠೇವಣಿದಾರರಿಗೆ ಬ್ಯಾಂಕುಗಳು ಒದಗಿಸುವಷ್ಟು ಸುರಕ್ಷೆಯನ್ನು ಇವು ಒದಗಿಸುವುದಿಲ್ಲ. ಠೇವಣಿ ವಿಮೆ ಮತ್ತು ಉದರಿ ಖಾತರಿ ನಿಗಮದ ರಕ್ಷೆ ಇತರ ಹಣಕಾಸು ಕಂಪನಿಗಳ ಠೇವಣಿಗೆ ಲಭ್ಯವಾಗುವುದಿಲ್ಲ. ರಿಸರ್ವ್ ಬ್ಯಾಂಕ್ ಈ ಸಂಗತಿಗಳತ್ತ ದೃಷ್ಟಿ ಹಾಯಿಸಿ ಠೇವಣಿದಾರರ ಹಿತ ರಕ್ಷಿಸಲು ಮುಂದಾಗಬೇಕು. ಠೇವಣಿಗಳನ್ನು ನಿಗದಿಯಾದ ದಿನಾಂಕದಂದು ಪಾವತಿ ಮಾಡದೆ ಅವನ್ನು ನವೀಕರಿಸುವಂತೆ ಠೇವಣಿದಾರರನ್ನು ಒತ್ತಾಯಿಸುತ್ತಾ ಪಾವತಿ ಮುಂದೂಡುವ ತಂತ್ರ ಬ್ಯಾಂಕೇತರ ಹಣಕಾಸು ಸಂಸ್ಥೆಗಳಲ್ಲಿ ಸಾಮಾನ್ಯ. ಇದಕ್ಕೆ ಪರಿಹಾರ ಬೇಕು. ಈ ಕಂಪನಿಗಳ ದ್ರವತ್ವವನ್ನು ಕಾಯ್ದುಕೊಳ್ಳಲು (ಬ್ಯಾಂಕುಗಳಿಗೆ ನಗದು ಮೀಸಲು ಅನುಪಾತ, ಪರಿನಿಯತ ದ್ರವತ್ವ ಅನುಪಾತ ಇರುವಂತೆ) ವ್ಯವಸ್ಥೆಯಾಗಬೇಕು. ಜತೆಗೆ ಅವು ಠೇವಣಿದಾರನೊಬ್ಬನಿಂದ ಸ್ವೀಕರಿಸಬಹುದಾದ ಠೇವಣಿಗಳ ಮೊತ್ತಕ್ಕೆ ಒಂದು ಮಿತಿಯೊಡ್ಡಬೇಕಾಗುತ್ತದೆ. ಹೀಗೆ ಮಾಡಿದಾಗ ಸಾರ್ವಜನಿಕರ ಠೇವಣಿಗೆ ಭದ್ರತೆ ಒದಗುತ್ತದೆ ; ಈ ಕಂಪನಿಗಳ ಹುಚ್ಚು ಮೇಲಾಟಕ್ಕೆ ಕಡಿವಾಣ ಹಾಕಿದಂತಾಗಿ ಬ್ಯಾಂಕುಗಳೊಂದಿಗೆ ಆರೋಗ್ಯಕರ ಪೈಪೋಟಿಯನ್ನಷ್ಟೆ ಉಳಿಸಿಕೊಳ್ಳುವಂತಾಗುತ್ತದೆ. ●

# ಹಣದ ವಿದ್ಯುನ್ಮಾನ ವರ್ಗಾವಣೆ

**ಜಿ. ಎಸ್. ರವೀಂದ್ರ**
ಭಾರತೀಯ ಸ್ಟೇಟ್ ಬ್ಯಾಂಕು, ಬೆಂಗಳೂರು

ಈಗ ಜಾರಿಯಲ್ಲಿರುವ ಹಣ ವರ್ಗಾವಣೆ ವಿಧಾನಗಳಿಗಿಂತ ಹೆಚ್ಚು ತ್ವರಿತವಾಗಿ ಎಲ್ಲಿಂದ ಎಲ್ಲಿಗೆ ಬೇಕಾದರೂ ಹಣ ವರ್ಗಾವಣೆ ಮಾಡಲು ವಿದ್ಯುನ್ಮಾನ ವ್ಯವಸ್ಥೆಯನ್ನು ಹೆಚ್ಚುಹೆಚ್ಚಾಗಿ ಬಳಸಿಕೊಳ್ಳಲಾಗುತ್ತಿದೆ.

ಭಾರತೀಯ ಬ್ಯಾಂಕುಗಳ ಜಾಲ ವಿಸ್ತರಿಸುತ್ತಿದ್ದಂತೆ ಹಾಗೂ ಅವುಗಳ ವಹಿವಾಟು ಹಿಗ್ಗುತ್ತಿದ್ದಂತೆ ಒಂದೇ ರೀತಿಯ ಕೆಲಸವನ್ನು ತ್ವರಿತಗತಿಯಲ್ಲಿ ನಿರ್ವಹಿಸಲು ಕಂಪ್ಯೂಟರ್‌ಗಳ ಬಳಕೆ 1960 ರಲ್ಲಿಯೆ ಆರಂಭವಾಯಿತು. ಒಂದು ರೀತಿಯಲ್ಲಿ ಹೀಗೆ ಸೀಮಿತವಾದ ಉದ್ದೇಶಕ್ಕಾಗಿ ಬಳಸಲ್ಪಡುತ್ತಿದ್ದ ಕಂಪ್ಯೂಟರ್‌ಗಳನ್ನು ಅವುಗಳ ಉಪಯುಕ್ತತೆಯ ಪ್ರಯೋಜನ ಪಡೆಯಲು ಬ್ಯಾಂಕಿಂಗ್‌ನ ಅನೇಕ ವ್ಯವಹಾರಗಳಲ್ಲಿಯೂ ಬಳಸಿಕೊಳ್ಳಲಾಯಿತು. ಇಂದಿಗೆ ಈ ಕಂಪ್ಯೂಟರ್‌ಗಳು ಬ್ಯಾಂಕಿಂಗ್ ವ್ಯವಹಾರಗಳನ್ನು ಬಲ್ಲ ತಜ್ಞರಂತೆ ಬ್ಯಾಂಕಿನ ಒಳಗೂ ಹೊರಗೂ ಕೆಲಸ ಮಾಡುತ್ತಿವೆ.

ಬ್ಯಾಂಕಿನ ಲೆಕ್ಕ-ಪತ್ರಗಳ ತಾಳೆಗಷ್ಟೇ ಕಂಪ್ಯೂಟರ್‌ಗಳನ್ನು ಬಳಸಿಕೊಂಡಿದ್ದ ಕೆಲವು ದಶಕಗಳ ನಂತರ ಅವುಗಳನ್ನು ಬ್ಯಾಂಕಿನ ಮುಂಗಟ್ಟೆಯ ಸೇವೆಗಳಿಗೂ ಉಪಯೋಗಿಸುವಂತಾದದ್ದು ಇತ್ತೀಚಿನ ಬೆಳವಣಿಗೆ. ಹೀಗೆ ಹಂತ ಹಂತವಾಗಿ ಬ್ಯಾಂಕಿಂಗ್ ಕ್ಷೇತ್ರದೊಳಗೆ ಕಾಲಿಟ್ಟ ಕಂಪ್ಯೂಟರ್‌ಗಳು ಗ್ರಾಹಕ ಸೇವೆಯನ್ನೂ ಕ್ಷಿಪ್ರವಾಗಿ ಕರಾರುವಾಕ್ಕಾಗಿ ನೀಡಬಲ್ಲದು ಎಂಬುದು ಅರಿವಾದೊಡನೆ ಹೊಸಹೊಸ ಸೇವೆಗಳಿಗೂ ಕಂಪ್ಯೂಟರ್‌ಗಳನ್ನು ಬಳಸಿಕೊಂಡು ತನ್ಮೂಲಕ ಉತ್ತಮ ಗ್ರಾಹಕ ಸೇವೆಯನ್ನು ಭಾರತೀಯ ಬ್ಯಾಂಕುಗಳು ನೀಡಲಾರಂಭಿಸಿದವು. ಗ್ರಾಹಕನ ಖಾತೆಯ ಬಡ್ಡಿ ಲೆಕ್ಕಾಚಾರ, ಅವನ ಪಾಸ್ ಪುಸ್ತಕಗಳ ನೀಡಿಕೆ, ವ್ಯವಹಾರಗಳ ದಾಖಲಾತಿ, ದಿನದ 24 ಗಂಟೆಯೂ ಗ್ರಾಹಕನ ಖಾತೆಗೆ ಜಮಾ ಅಥವಾ ಹಣ ಹಿಂಪಡೆಯುವ ಸೌಲಭ್ಯ (ಸ್ವಯಂ ಚಲಿ ಸರಾಫ್ ಯಂತ್ರಗಳ ಮೂಲಕ)—ಇವುಗಳು ಇಂದಿನ ಕಂಪ್ಯೂಟರ್ ಆಧಾರಿತ ಗ್ರಾಹಕ ಸೇವೆಯ ಸೌಲಭ್ಯಗಳು.

## ಹಣ ವರ್ಗಾವಣೆ

ಒಬ್ಬ ಗ್ರಾಹಕ, ಅವನು ಬ್ಯಾಂಕ್ ಖಾತೆದಾರ ಆಗಿರಲಿ ಅಥವಾ ಇಲ್ಲದಿರಲಿ, ಬ್ಯಾಂಕನ್ನು ಅರಸಿ ಬರುವ ಸೇವೆಗಳಲ್ಲಿ ಬಹಳ ಮುಖ್ಯವಾದದ್ದು ಹಣ ವರ್ಗಾವಣೆಯ ಸೇವೆ. ಬ್ಯಾಂಕುಗಳಿಗೂ ಈ ಸೇವೆಯಿಂದ ಆದಾಯ ಇರುವುದಲ್ಲದೆ ತನ್ನ ಉದರಿ ನೀಡುವ ಚಟುವಟಿಕೆಗೆ ಯಾವ ವೆಚ್ಚವೂ ಇಲ್ಲದಂತೆ ಹಣ ಪಡೆಯುವ ಒಂದು ಮಾರ್ಗವೂ ಆಗಿದೆ.

ಹಣ ವರ್ಗಾವಣೆಯ ಮಾರ್ಗಗಳೆಂದರೆ :

1 ಡಿಮಾಂಡ್ ಡ್ರಾಫ್ಟ್‌ಗಳು,
2 ಅಂಚೆ ವರ್ಗಾವಣೆಗಳು,
3 ತಂತಿ ವರ್ಗಾವಣೆಗಳು ಮತ್ತು
4 ಚೆಕ್ಕುಗಳ ಮೂಲಕ.

ತೀರುವೆ ಮನೆ ಹಾಗೂ ರಾಷ್ಟ್ರೀಯ ತೀರುವಳಿ ಪದ್ಧತಿಯಿಂದಾಗಿ ಚೆಕ್ಕುಗಳ ಮೂಲಕ ಒಬ್ಬರಿಂದ ಮತ್ತೊಬ್ಬರಿಗೆ ಹಣ ವರ್ಗಾವಣೆ ಜನಪ್ರಿಯವಾಗಿದೆ. ತಂತಿ ವರ್ಗಾವಣೆಯೂ ಅದರ 'ವೇಗ'ದಿಂದಾಗಿ ಜನಪ್ರಿಯವಾಗಬಹುದಾಗಿದ್ದರೂ ವಿಳಂಬ ಇದ್ದದ್ದೇ. ಅಂಚೆ ವರ್ಗಾವಣೆ, ಡಿಮಾಂಡ್ ಡ್ರಾಫ್ಟ್‌ಗಳೂ ಕೂಡ ವಿಳಂಬಕ್ಕೆ ಹೊರತಾಗಿಲ್ಲ. ಈ ಮೂರೂ ವಿಧಗಳಲ್ಲಿಯೂ ಒಂದು ನ್ಯೂನತೆ ಎಂದರೆ ಹಣ ವರ್ಗಾವಣೆ ಒಂದು ಬ್ಯಾಂಕಿನ ಒಂದು ಶಾಖೆಯಿಂದ ಅದೇ ಬ್ಯಾಂಕಿನ ಮತ್ತೊಂದು ಶಾಖೆಗೆ ಮಾತ್ರ ಹಣ ವರ್ಗಾವಣೆ ಮಾಡಲು ಸಾಧ್ಯ. ವ್ಯಾಪಕವಾದ ಬದಲಾವಣೆಗಳನ್ನು ಎಲ್ಲ ಕ್ಷೇತ್ರಗಳಲ್ಲಿಯೂ ಕಾಣುತ್ತಿರುವ ಇಂದಿನ ವೇಗದ ಬದುಕಿನಲ್ಲಿ ಯಾರು ಬೇಕಾದರೂ ಯಾವುದೇ ಬ್ಯಾಂಕಿನ ಯಾವುದೇ ಶಾಖೆಯಿಂದ ಮತ್ತಾವುದೇ ಬ್ಯಾಂಕಿನ ಯಾವುದೇ ಶಾಖೆಗೆ ವರ್ಗಾಯಿಸುವ ಸೇವಾ ಸೌಲಭ್ಯವನ್ನು ಗ್ರಾಹಕ ಅಪೇಕ್ಷಿಸುವುದು ಸಹಜ. ವಿದೇಶದಲ್ಲಿ ಇಂತಹ ಸೇವೆಯನ್ನು ಬ್ಯಾಂಕುಗಳು ನೀಡುತ್ತಿವೆ. ಭಾರತೀಯ ಬ್ಯಾಂಕುಗಳೂ ಇನ್ನು ಮುಂದೆ ಅಂತಹ ಸೇವೆಗಳನ್ನು ನೀಡಲು ಸಾಧ್ಯ. ಈ ಸೇವೆಯೆ ಹಣದ ವಿದ್ಯುನ್ಮಾನ ವರ್ಗಾವಣೆ.

## ಹಣದ ವಿದ್ಯುನ್ಮಾನ ವರ್ಗಾವಣೆ

ಕಂಪ್ಯೂಟರ್ ತಂತ್ರಜ್ಞಾನದ ಜೊತೆಗೆ ದೂರ ಸಂಪರ್ಕ ತಂತ್ರಜ್ಞಾನದಲ್ಲೂ ಆಗಿರುವ ಬೆಳವಣಿಗೆಯನ್ನು ಸಾರ್ಥಕವಾಗಿ ಬಳಸಿಕೊಂಡು ರೂಪಿಸಲಾಗಿರುವ ಸೇವೆಯೆ ಹಣದ ವಿದ್ಯುನ್ಮಾನ ವರ್ಗಾ

ವಣೆ (ಎಲೆಕ್ಟ್ರಾನಿಕ್ ಫಂಡ್ ಟ್ರಾನ್ಸ್‌ಫರ್). ಹಣವಿರಲಿ, ಮಾಹಿತಿ ಇರಲಿ, ದತ್ತಾಂಶವಿರಲಿ ಎಲ್ಲವನ್ನೂ ಸಂಖ್ಯೆಗಳಾಗಿ ಪರಿವರ್ತಿಸಿ ಅವುಗಳನ್ನು ಬೇಕಾದ ಕಡೆಗೆ ರವಾನಿಸಿ ಪುನಃ ಅದನ್ನು ಮಾಹಿತಿ, ದತ್ತಾಂಶಗಳಾಗಿ ಪರಿವರ್ತಿಸುವ 'ಪರಿವರ್ತಕ'ಗಳೆಂಬ ಸಾಧನಗಳ ಮೂಲಕ ಇಂತಹ ಸೇವೆ ನೀಡಲು ಸಾಧ್ಯ. ಸಾಮಾನ್ಯವಾಗಿ ದೂರವಾಣಿಗಳಲ್ಲಿ ಸಂದೇಶಗಳ ರವಾನೆ ತರಂಗ ರೂಪದಲ್ಲಿರುತ್ತದೆ. ಕಂಪ್ಯೂಟರ್‌ಗಳಾದರೋ ತಮ್ಮ ಕೆಲಸಗಳನ್ನು ಗುರುತಿಸಿಕೊಳ್ಳುವುದು 0 ಮತ್ತು 1 ಎಂಬ ಸಂಖ್ಯಾಕ್ಷರಗಳಲ್ಲಿ. ಸಂಖ್ಯಾಕ್ಷರಗಳನ್ನು ತರಂಗ ರೂಪದಲ್ಲಿ ಹಾಗೂ ತರಂಗ ರೂಪವನ್ನು ಸಂಖ್ಯಾಕ್ಷರಗಳಿಗೆ ಪರಿವರ್ತಿಸುವ ಸಾಧನವೆ ಈ ಪರಿವರ್ತಕಗಳು. ಕಂಪ್ಯೂಟರ್ ಹಣದ ವರ್ಗಾವಣೆ ಬಗ್ಗೆ ರೂಪಿಸುವ ಸಂದೇಶಗಳನ್ನು ತರಂಗ ರೂಪದಲ್ಲಿ ಟೆಲಿಫೋನ್ ಸಹಾಯದಿಂದ ಮತ್ತೊಂದು ಕಡೆಗೆ ರವಾನಿಸಿ ಅಲ್ಲಿ ಪುನಃ ಸಂದೇಶದ ಮೂಲ ರೂಪವನ್ನು ಈ ಪರಿವರ್ತಕಗಳು ಒದಗಿಸಿಕೊಡುತ್ತವೆ. ಕಂಪ್ಯೂಟರ್, ಪರಿವರ್ತಕಗಳು ಬ್ಯಾಂಕಿಂಗ್ ಶಾಖಾಜಾಲ ಇವುಗಳೆಲ್ಲವನ್ನೂ ಬಳಸಿಕೊಂಡು ಹಣದ ವಿದ್ಯುನ್ಮಾನ ವರ್ಗಾವಣೆಗೆ ಭಾರತೀಯ ರಿಸರ್ವ್‌ಬ್ಯಾಂಕು ಸಹ ಅನೇಕ ಯೋಜನೆಗಳನ್ನು ಹಾಕಿಕೊಂಡಿದೆ.

ಹಣ ವರ್ಗಾವಣೆ ಮಾಡಬೇಕೆಂದಿರುವ ಗ್ರಾಹಕ ತನ್ನ ಬ್ಯಾಂಕಿನ ಶಾಖೆಗೆ ಹೋಗಿ ನಿಗದಿತ ಅರ್ಜಿ ನಮೂನೆಯಲ್ಲಿ ಯಾರಿಗೆ ಹಣ ವರ್ಗಾವಣೆ ಮಾಡಬೇಕು, ಯಾವ ಬ್ಯಾಂಕಿನ ಶಾಖೆ, ಸ್ಥಳ, ಖಾತೆ ಸಂಖ್ಯೆ ಇತ್ಯಾದಿ ಮಾಹಿತಿಗಳನ್ನು ನೀಡಿ ಹಣ ನೀಡುತ್ತಾನೆ. ಬ್ಯಾಂಕು ಈ ಮಾಹಿತಿಯನ್ನು ತಕ್ಷಣ ವಿದ್ಯುನ್ಮಾನ ಅಂಚೆ (ಇ-ಮೇಲ್) ಮೂಲಕ ತನ್ನ ಸೇವಾ ಶಾಖೆಗೆ ರವಾನಿಸಿಬಿಡುತ್ತದೆ. ಸೇವಾ ಶಾಖೆ ತನಗೆ ಬರುವ ಈ ಮಾಹಿತಿಗಳನ್ನು ಅದು ಬರುತ್ತಿದ್ದಂತೆ ತನ್ನ ಕಂಪ್ಯೂಟರ್‌ನಲ್ಲಿ ಸಂಗ್ರಹಿಸಿ ಸ್ಥಳಗಳ ಆಧಾರದ ಮೇಲೆ ವಿಂಗಡಿಸಿ ಆ ಮಾಹಿತಿಯನ್ನು ವಿದ್ಯುನ್ಮಾನ ಅಂಚೆ ಮೂಲಕ ರಿಸರ್ವ್ ಬ್ಯಾಂಕಿಗೆ ರವಾನಿಸಿಬಿಡುತ್ತದೆ. ವಿದ್ಯುನ್ಮಾನ ಅಂಚೆ ಎಂದರೆ ಕಂಪ್ಯೂಟರ್‌ಗಳು ಒಂದರ ಜೊತೆಗೆ ಮತ್ತೊಂದು ಸಂಭಾಷಿಸುವ ಒಂದು ವಿಧಾನ ಎನ್ನಬಹುದು. ಒಂದು ಕಂಪ್ಯೂಟರ್‌ನಿಂದ ಮಾಹಿತಿ, ದತ್ತಾಂಶಗಳನ್ನು, ಪ್ರತಿರೂಪಗಳನ್ನು ದೂರವಾಣಿ ಮೂಲಕ ಒಂದು ಕಡೆಯಿಂದ ಕಳಿಸಿ ಮತ್ತೊಂದು ಕಡೆ ಅದನ್ನು ಪಡೆದು ಅಲ್ಲಿನ ಕಂಪ್ಯೂಟರ್‌ಗೆ ಮಾಹಿತಿ ಒದಗಿಸಿ ಕೊಡುವ ವ್ಯವಸ್ಥೆಯೆ ವಿದ್ಯುನ್ಮಾನ ಅಂಚೆ. ಇಲ್ಲಿ ಎರಡೂ ಬದಿಯಲ್ಲಿ ವ್ಯಕ್ತಿಗಳು ಇರಲೇಬೇಕೆಂದಿಲ್ಲ. ಕಂಪ್ಯೂಟರ್‌ಗೆ ಮಾಹಿತಿ ಒದಗಿಸಿಬಿಟ್ಟರೆ ಅದು ತಾನೆ ಸಂದೇಶಗಳನ್ನು ಬೇರೆ ಬೇರೆ ಸ್ಥಳಗಳಿಗೆ ರವಾನಿಸಿಬಿಡುತ್ತದೆ. ರಿಸರ್ವ್ ಬ್ಯಾಂಕಿನ ಕಂಪ್ಯೂಟರ್‌ಗೆ ಒದಗಿ ಬರುವ ಮಾಹಿತಿಗಳನ್ನು ಅಲ್ಲಿ ಪ್ರಕ್ರಮೀಕರಿಸಿ ಅದು ಪ್ರತಿ ಬ್ಯಾಂಕಿನ ಖಾತೆಗೆ ಧನಿಸಬೇಕಾದ ಅಥವಾ ಋಣಿಸಬೇಕಾದ ಒಟ್ಟು ಮೊತ್ತವನ್ನು ಲೆಕ್ಕಮಾಡಿ ಆಯಾ ಬ್ಯಾಂಕುಗಳ ಖಾತೆಗೆ ಹೊಂದಿಸಿಬಿಡುತ್ತದೆ. ಬ್ಯಾಂಕುಗಳಿಗೆ ಅನುಸಾರವಾಗಿ ಜಮಾ ಪಟ್ಟಿಯನ್ನು ತಯಾರುಮಾಡಿ ಅದನ್ನು ಪುನಃ ಆಯಾ ಬ್ಯಾಂಕಿನ ಸೇವಾಶಾಖೆಗೆ ವಿದ್ಯುನ್ಮಾನ ಅಂಚೆ ಮೂಲಕ ರವಾನಿಸುತ್ತದೆ. ಸೇವಾ ಶಾಖೆಗಳು ತಮ್ಮಲ್ಲಿರುವ ಮಾಹಿತಿಯನ್ನಾಧರಿಸಿ ತಮ್ಮ ಶಾಖೆಗಳಿಗೆ ಹಣ ಜಮಾ ಪಟ್ಟಿಯನ್ನು ಕಳಿಸಿಕೊಡುತ್ತವೆ. ಶಾಖೆಗಳಲ್ಲಿ ಆಯಾ ಖಾತೆಗಳಿಗೆ ಹಣ ಜಮಾ ಆಗಿ ಹಣದ ವರ್ಗಾವಣೆ ಕಾರ್ಯ ಪೂರ್ಣಗೊಳುತ್ತದೆ.

### ಇಂದಿನ ತೊಂದರೆಗಳು

ವಿದ್ಯುನ್ಮಾನ ಹಣ ವರ್ಗಾವಣೆಗೆ ಇಂದಿನ ತೊಂದರೆಗಳೆಂದರೆ ಬ್ಯಾಂಕ್ ಶಾಖೆಗಳಲ್ಲಿ ಕಂಪ್ಯೂಟರ್‌ನ ಬಳಕೆ ಕೇವಲ ನಗರ ಪ್ರದೇಶಗಳಲ್ಲಷ್ಟೆ ಆಗಿರುವುದು. ಎಲ್ಲಾ ಬ್ಯಾಂಕುಗಳಲ್ಲೂ ಕಂಪ್ಯೂಟರೀಕರಣ ಒಂದೇ ಮಟ್ಟದಲ್ಲಿ ಆಗಿಲ್ಲದಿರುವುದು. ಆದರೆ ಈ ಪರಿಸ್ಥಿತಿ ಇನ್ನು ಕೆಲವೇ ವರ್ಷಗಳಲ್ಲಿ ಸರಿಯಾಗುವ ಸಾಧ್ಯತೆಗಳಿರುವುದರಿಂದ ಬಹುತೇಕ ಎಲ್ಲಾ ಶಾಖೆಗಳೂ ಕಂಪ್ಯೂಟರ್ ಬಳಸುವಂತಾಗಿ ವಿದ್ಯುನ್ಮಾನ ಹಣ ವರ್ಗಾವಣೆ ಸೌಲಭ್ಯ ಹೆಚ್ಚಾಗಿ ವಿಸ್ತಾರಗೊಳ್ಳುತ್ತದೆ.

### ಸುರಕ್ಷತೆ

ಹಣದ ವರ್ಗಾವಣೆಯಾದ್ದರಿಂದ ಸುರಕ್ಷತೆ ಬಹಳ ಮುಖ್ಯವಾಗುತ್ತದೆ. ವಿದ್ಯುನ್ಮಾನ ಹಣ ವರ್ಗಾವಣೆಯಲ್ಲಿ ಈ ಅಂಶದ ಕಡೆಗೆ ಗಮನ ಹರಿಸಿ ಹೆಚ್ಚಿನ ಸುರಕ್ಷತೆಯನ್ನೂ ನೀಡಲಾಗಿದೆ. ಸಂಕೇತ ಪದಗಳನ್ನು, ಕೀಲಿ ಪದಗಳನ್ನು ಅಳವಡಿಸಿಕೊಂಡು ಸಂದೇಶ ರವಾನಿಸುವ ಹಾಗೆ ತಾಂತ್ರಿಕಾಂಶ (ಸಾಫ್ಟ್‌ವೇರ್) ವನ್ನು ರೂಪಿಸಲಾಗಿದೆ.

### ಅನುಕೂಲತೆಗಳು

ಹಣದ ವರ್ಗಾವಣೆ ಸಂದೇಶಗಳ ಮೂಲಕವಾಗಿ ಆಗುವುದರಿಂದ ಡ್ರಾಫ್ಟ್ ನಮೂನೆಗಳಾಗಲಿ, ಅಂಚೆ ವರ್ಗಾವಣೆ ನಮೂನೆಗಳಾಗಲಿ ಬೇಕಾಗುವುದಿಲ್ಲ. ಇಂತಹ ನಮೂನೆಗಳನ್ನು ಮುದ್ರಿಸುವ ವೆಚ್ಚಗಳಲ್ಲಿ ಗಣನೀಯ ಪ್ರಮಾಣದ ಉಳಿತಾಯವಾಗಿ ಇದು ಬ್ಯಾಂಕುಗಳ ಲಾಭಪ್ರದತೆಯ ಮೇಲೆ ಪರಿಣಾಮ ಬೀರುತ್ತದೆ. ಗ್ರಾಹಕರಿಗೆ ಅಂತರರಾಷ್ಟ್ರೀಯ ಮಟ್ಟದ ಸೇವೆಯನ್ನು ಭಾರತೀಯ ಬ್ಯಾಂಕುಗಳೂ ನೀಡಿದಂತಾಗಿ ಬ್ಯಾಂಕ್-ಗ್ರಾಹಕ ಮೈತ್ರಿ ಭದ್ರಗೊಳ್ಳುತ್ತದೆ. ವಿದ್ಯುನ್ಮಾನ ಅಂಚೆಗಾಗಿ ತಗಲುವ ವೆಚ್ಚವೂ ಕಡಿಮೆಯಾಗುತ್ತದೆ. ದೆಹಲಿ ಹಾಗೂ ಬಾಂಬೆಯ ನಡುವೆ ವಿದ್ಯುನ್ಮಾನ ಅಂಚೆ ಸಂದೇಶದ ರವಾನೆ ವೆಚ್ಚ ಸುಮಾರು ರೂ 17. ದೂರವಾಣಿ ಮೂಲಕವಾದರೆ ಇದೇ ಸಂದೇಶಕ್ಕೆ ಆಗುವ ವೆಚ್ಚ ಸುಮಾರು ರೂ 188. ಫ್ಯಾಕ್ಸ್ ಮೂಲಕ ಇದೇ ಸಂದೇಶದ ರವಾನೆಗೆ ಆಗುವ ವೆಚ್ಚ ಸುಮಾರು ರೂ 39.

### ಅಂತರರಾಷ್ಟ್ರೀಯ ಮಟ್ಟದಲ್ಲಿ

ವಿದ್ಯುನ್ಮಾನ ಹಣ ವರ್ಗಾವಣೆ ನಮಗೆ ಒಂದು ನವೀನ ಪರಿಕಲ್ಪನೆಯಾಗಿದ್ದರೂ ವಿದೇಶಿ ಬ್ಯಾಂಕುಗಳು ಇಂತಹ ಪರಿಕಲ್ಪನೆಯನ್ನು ಬಹಳ ಹಿಂದೆಯೇ ಬಳಸಲಾರಂಭಿಸಿದ್ದವು. ಒಂದು ದೇಶದಿಂದ ಮತ್ತೊಂದು ದೇಶಕ್ಕೆ ಕೂಡ ಹಣದ ಮಾಹಿತಿಯ ವರ್ಗಾವಣೆ ಕ್ಷಿಪ್ರವಾಗಿ ನಡೆಸಲು 'ಸ್ವಿಪ್ಟ್' ಎಂಬ ಸಂಸ್ಥೆಯೆ ಹುಟ್ಟಿಕೊಂಡಿತು. ಭಾರತದ ಬ್ಯಾಂಕುಗಳೂ ಸೇರಿದಂತೆ ವಿಶ್ವದ ಅನೇಕ ಬ್ಯಾಂಕುಗಳು ಈ ಸಂಸ್ಥೆಯ ಸದಸ್ಯತ್ವವನ್ನು ಪಡೆದು ಹಣದ ವರ್ಗಾವಣೆಯ ಮಾಹಿತಿಯನ್ನು ತ್ವರಿತಗತಿಯಲ್ಲಿ ಪಡೆಯುತ್ತಿವೆ. ಸ್ವಿಫ್ಟ್ ಎಂಬುದು ವಿಶ್ವವ್ಯಾಪಿ ಅಂತರ ಬ್ಯಾಂಕ್ ಹಣಕಾಸು ದೂರಸಂಪರ್ಕ ಸಂಘ ಎಂಬುದರ ಸಂಕ್ಷಿಪ್ತರೂಪ (ಸೊಸೈಟಿ ಫಾರ್ ವರ್ಲ್ಡ್‌ವೈಡ್ ಇಂಟರ್–ಬ್ಯಾಂಕ್ ಫೈನಾನ್ಸಿಯಲ್ ಟೆಲಿಕಮ್ಯುನಿಕೇಷನ್ಸ್). ಈ ವ್ಯವಸ್ಥೆ 1977ರಿಂದಲೇ ಜಾರಿಯಲ್ಲಿದೆ. ಇವತ್ತಿಗೆ ಈ ಸೌಲಭ್ಯವನ್ನು ಬಳಸಿಕೊಳ್ಳುವ ಬ್ಯಾಂಕುಗಳ ಸಂಖ್ಯೆ ಗಣನೀಯವಾಗಿ ಏರಿದೆ. ನಿರ್ದಿಷ್ಟವಾದ ನಮೂನೆಗಳಲ್ಲಿ ಹಣಕಾಸು ವ್ಯವಹಾರದ ಮಾಹಿತಿಯನ್ನು ಪಡೆದು ಅದನ್ನು ರವಾನಿಸಿಕೊಡುವುದೇ ಸ್ವಿಪ್ಟ್‌ನ ಉದ್ದೇಶ. ಕೇವಲ ಹಣಕಾಸಿಗೆ ಸಂಬಂಧಿಸಿದ ವೈವಿಧ್ಯಮಯ ಸಂದೇಶಗಳಿಗೆ ಮಾತ್ರ ಸ್ವಿಪ್ಟ್‌ನ ಬಳಕೆ ಇದ್ದರೂ ಹಣಕಾಸು ವಹಿವಾಟುಗಳಿಗೆ ಸಂಬಂಧಿಸಿದ ಅಪರೂಪದ ಮಾಹಿತಿಗಳನ್ನೂ ಈ ರೀತಿ ರವಾನಿಸಬಹುದು. ಗ್ರಾಹಕ ವರ್ಗಾವಣೆ, ಬ್ಯಾಂಕ್ ವರ್ಗಾವಣೆ ಇತ್ಯಾದಿ ಮಾಹಿತಿಗಳಿಗೆ ಹೆಚ್ಚಾಗಿ ಈ ಸೌಲಭ್ಯವನ್ನು ಎಲ್ಲಾ ಬ್ಯಾಂಕುಗಳೂ ಬಳಸಿಕೊಳ್ಳುತ್ತಿವೆ.

### ಮುಂದಿನ ಬ್ಯಾಂಕಿಂಗ್

ಬ್ಯಾಂಕುಗಳು ತಮ್ಮವೇ ಆದ ವ್ಯವಸ್ಥಿತವಾದ ಸಂಪರ್ಕ ಜಾಲಗಳನ್ನು ನಿರ್ಮಿಸಿಕೊಂಡು ಹಣದ ವಿದ್ಯುನ್ಮಾನ ವರ್ಗಾವಣೆಯನ್ನು ಕ್ಷಿಪ್ರಗತಿಯಲ್ಲಿ ತಮ್ಮವೇ ಶಾಖೆಗಳಿಗೆ ಹಾಗೂ ಇತರ ಬ್ಯಾಂಕ್ ಶಾಖೆಗಳಿಗೆ ವರ್ಗಾಯಿಸಬಲ್ಲವು. ಬ್ಯಾಂಕಿಂಗ್‌ಗಾಗಿಯೆ ಬೇರೆಯಾದ ಜಾಲವೊಂದರ ಸಹಾಯದಿಂದ ಹಣದ ವಿದ್ಯುನ್ಮಾನ ವರ್ಗಾವಣೆ ನಿಜವಾದ ಅರ್ಥದಲ್ಲಿ ಕಾರ್ಯರೂಪಕ್ಕೆ ಬರುವುದರಲ್ಲಿ ಸಂಶಯವಿಲ್ಲ. ಮುಂದೆ ಗ್ರಾಹಕರೂ ಕಂಪ್ಯೂಟರ್‌ಗಳನ್ನು ಬಳಸುವುದು ಸಹಜವಾದ್ದರಿಂದ ಕಂಪ್ಯೂಟರ್‌ಗಳನ್ನು ಹೊಂದಿರುವ ಗ್ರಾಹಕರು ಮನೆಯಿಂದಲೆ ಬ್ಯಾಂಕುಗಳ ಸಂಪರ್ಕ ಸಾಧಿಸಬಹುದಾಗಿ ಒಂದೊಂದು ಮನೆಯೂ ಬ್ಯಾಂಕ್ ಶಾಖೆಯಾಗಬಹುದು. ಮನೆಯಿಂದಲೇ ಪರಸ್ಥಳಗಳಿಗೆ ಹಣ ವರ್ಗಾವಣೆ ಮಾಡಬಹುದು.

ಈ ಲೇಖನದ ಪರಿಷ್ಕರಣ ಸಂದರ್ಭದಲ್ಲಿ ಭಾರತೀಯ ರಿಸರ್ವ್ ಬ್ಯಾಂಕು ಹಣದ ವಿದ್ಯುನ್ಮಾನ ವರ್ಗಾವಣೆಗೆ ಸಂಬಂಧಿಸಿದಂತೆ ಒಂದು ಅಧ್ಯಯನವನ್ನು ನಡೆಸಲು ಹಾಗೂ ತತ್ಸಂಬಂಧವಾಗಿ ಕೆಲವು ಅಧಿನಿಯಮಗಳನ್ನು ರೂಪಿಸಲು ಸಮಿತಿಯೊಂದನ್ನು ನಿಯಮಿಸಿರುವ ಅಂಶ ವರದಿಯಾಗಿದೆ. ಭಾರತದ ಬ್ಯಾಂಕಿಂಗ್‌ನಲ್ಲೂ ಹಣದ ವಿದ್ಯುನ್ಮಾನ ವರ್ಗಾವಣೆ ಪರಿಕಲ್ಪನೆ ಸಾಧ್ಯ ಎನ್ನುವುದಕ್ಕೆ ಇದು ಶುಭಸೂಚಕ. ಬ್ಯಾಂಕಿಂಗ್‌ನಲ್ಲಿ ಪಾವತಿ ಪದ್ಧತಿಯಲ್ಲಿ ತಂತ್ರಜ್ಞಾನದ ಬಳಕೆಯ ಅಭಿವೃದ್ಧಿ ಬಗ್ಗೆ ಸರಾಫ್ ಸಮಿತಿ ನೀಡಿದ ಶಿಫಾರಸ್ಸಿನ ಮೇರೆಗೆ ಭಾರತದಲ್ಲಿ ಹಣದ ವಿದ್ಯುನ್ಮಾನ ವರ್ಗಾವಣೆ ಪದ್ಧತಿಯನ್ನು ಸ್ಥಾಪಿಸಲು ಹೊಸ ಸಮಿತಿಯ ರಚನೆಯನ್ನು ಮಾಡಲಾಗಿದೆ. ಭಾರತೀಯ ರಿಸರ್ವ್ ಬ್ಯಾಂಕಿನ ಮುಖ್ಯ ಕಾನೂನು ಸಲಹಾಗಾರರಾಗಿರುವ ಶ್ರೀಮತಿ ಕೆ. ಎಸ್. ಷೆರಿ ಅವರು ಈ ಸಮಿತಿಯ ಅಧ್ಯಕ್ಷರಾಗಿದ್ದಾರೆ. ಈ ಸಮಿತಿಯ ಮುಖ್ಯ ಪರ್ಯಾಲೋಚನಾಂಶಗಳೆಂದರೆ :

ಹಣದ ವಿದ್ಯುನ್ಮಾನ ವರ್ಗಾವಣೆ ಹಾಗೂ ಅದರ ವ್ಯಾಪ್ತಿಯ ಬಗ್ಗೆ ಸ್ಪಷ್ಟ ರೂಪಣೆ ನೀಡುವುದು,

ಈ ವರ್ಗಾವಣೆಯ ಒಪ್ಪಂದದಲ್ಲಿ ಭಾಗಿಯಾಗುವವರು ಕರಾರಿನ ಪ್ರಕಾರ ಅನುಸರಿಸಬೇಕಾದ ಕಟ್ಟುಪಾಡುಗಳನ್ನು, ಅವರವರ ಜವಾಬ್ದಾರಿಗಳನ್ನು ಹಾಗೂ ಹೊಣೆಗಾರಿಕೆಗಳನ್ನು ನಿರ್ಧರಿಸುವುದು,

ಈ ಪದ್ಧತಿಯ ಕಾರ್ಯವಿಧಾನದಲ್ಲಿ ಸಂರಕ್ಷತೆ : ಯಾವುದೇ ಹಂತದಲ್ಲಿ ಕಾರ್ಯವಿಧಾನದಲ್ಲಿ ವಿಫಲತೆ ಆದಾಗ ಹೊಣೆಗಾರಿಕೆಯನ್ನು ಸ್ಪಷ್ಟಪಡಿಸುವುದು,

ಸಂಪರ್ಕ ಜಾಲದಲ್ಲಿ (ಕಮ್ಯುನಿಕೇಷನ್ ನೆಟ್‌ವರ್ಕ್) ಸುರಕ್ಷತೆ, ಭದ್ರತೆ ಮತ್ತು ದಕ್ಷತೆಗಳ ಪರಿಮಿತಿಯನ್ನು ಸ್ಪಷ್ಟಪಡಿಸುವುದು,

ವಿದ್ಯುನ್ಮಾನ ಪರಿಸರದಲ್ಲಿ 'ವಂಚನೆ'ಯನ್ನು ಸ್ಪಷ್ಟಪಡಿಸುವುದು,

ಬ್ಯಾಂಕ್ ವಿಫಲತೆಯ ಮತ್ತು ಇತರ ಘಟನೆಗಳ ಪರಿಣಾಮಗಳಲ್ಲಿ ಅನುಸರಿಸಬೇಕಾದ ಮಾರ್ಗಗಳು,

ವಿದ್ಯುನ್ಮಾನ ಮಾಧ್ಯಮಗಳನ್ನು ಸಾಕ್ಷಿಯಾಗಿ ಪರಿಗಣಿಸಲು ಅಂಗೀಕಾರ್ಹತೆ ಮತ್ತು ಇವುಗಳ ಸಂರಕ್ಷಣ ಕಾಲಾವಧಿ ಇತ್ಯಾದಿ.

ಇದಕ್ಕಾಗಿ ಹೊಸದಾದ ಕಾನೂನುಗಳ ರಚನೆ ಹಾಗೂ ಈಗಿರುವ ಪರಕ್ರಾಮ್ಯ ಸಂಲೇಖಗಳ ಅಧಿನಿಯಮಗಳಿಗೆ, ಬ್ಯಾಂಕರರ ಪುಸ್ತಕಗಳ ಸಾಕ್ಷ್ಯ ಅಧಿನಿಯಮಗಳಿಗೆ, ಪ್ರತಿಭೂತಿ ಮತ್ತು ಕರಾರು ಅಧಿನಿಯಮಗಳಿಗೆ ಸೂಕ್ತ ಬದಲಾವಣೆಗಳನ್ನು ಹಣದ ವಿದ್ಯುನ್ಮಾನ ವರ್ಗಾವಣೆಗೆ ಸಂಬಂಧಿಸಿದಂತೆ ಮಾಡುವುದು.

ಇನ್ನು ಮುಂದೆ ಹಣದ ವಿದ್ಯುನ್ಮಾನ ವರ್ಗಾವಣೆ ಅತ್ಯಂತ ಜನಪ್ರಿಯ ಸೇವೆಯಾಗುವುದರಲ್ಲಿ ಸಂದೇಹವಿಲ್ಲ.

# ಪರಸ್ಪರ ನಿಧಿಗಳು

ಉದಯಕುಮಾರ ದಾನಿ
ಭಾರತೀಯ ಸ್ಟೇಟ್ ಬ್ಯಾಂಕ್, ಬನಹಟ್ಟಿ–587361

**ಅಗತ್ಯವಾದ ಭದ್ರತೆ, ಸುಲಭ ನಗದೀಕರಣ ಸೌಲಭ್ಯ ಹಾಗೂ ಹೆಚ್ಚಿನ ಪ್ರತಿಫಲ ನೀಡುವ ಭರವಸೆಗಳಿಂದ ಕೂಡಿರುವ ಪರಸ್ಪರ ನಿಧಿಗಳು ಈಗ ಹಣದ ಉಳಿತಾಯ ಮತ್ತು ಗಳಿಕೆಯ ಜನಪ್ರಿಯ ಸಾಧನಗಳಾಗಿವೆ. ಆದರೆ ಇವು ನಿರೀಕ್ಷಿಸಿದಷ್ಟು ಯಶಸ್ಸು ಗಳಿಸಿಲ್ಲ.**

ಹಣವನ್ನು ಗಳಿಸುವದು, ಗಳಿಸಿದ ಹಣವನ್ನು ದ್ವಿಗುಣಗೊಳಿಸಲು ಯತ್ನಿಸುವುದು ಮಾನವನ ಅಚ್ಚುಮೆಚ್ಚಿನ ಹವ್ಯಾಸ. ಶೇರುಗಳಲ್ಲಿ ಹಣ ತೊಡಗಿಸುವದರಿಂದ ಧಿಡೀರ್ ಶ್ರೀಮಂತರಾಗಬಹುದೆಂದು ದೇಶದ ಎಲ್ಲ ವರ್ಗದ ಜನರೂ ತಿಳಿದಿದ್ದಾರೆ.

ಆದರೆ ಲೆಕ್ಕಾಚಾರದಿಂದಲೇ ಜೀವನ ನಡೆಸುವ ಮಧ್ಯಮ ವರ್ಗ ಮಾತ್ರ ಇನ್ನೂ ಮೈಚಳಿ ಬಿಟ್ಟು ಶೇರುಗಳಲ್ಲಿ ಹಣ ತೊಡಗಿಸುವದಿಲ್ಲ. ಕಳೆದುಕೊಂಡರೆ ಹೇಗೆ ? ಎಂಬ ಚಿಂತೆಯೇ ಅವರ ಹಿಂಜರಿಕೆಗೆ ಕಾರಣ.

ಈ ವರ್ಗದ ಜನಕ್ಕೆ ತಮ್ಮ ಹಣಕ್ಕೆ ಭದ್ರತೆ ಅತಿ ಮುಖ್ಯ. ನಂತರ ಸುಲಭ ನಗದೀಕರಣ ಹಾಗೂ ಹೂಡಿಕೆಗೆ ಪ್ರತಿಫಲ.

ಬ್ಯಾಂಕುಗಳು ತಮ್ಮಲ್ಲಿ ಇಟ್ಟ ಹಣಕ್ಕೆ ನೂರಕ್ಕೆ ನೂರರಷ್ಟು ಭದ್ರತೆ ಒದಗಿಸಿದರೂ, ನಗದೀಕರಣ ಸುಲಭವಾದರೂ ಪ್ರತಿಫಲ ಕಡಿಮೆ.

ಅಂಚೆ ಕಚೇರಿಗಳ ವಿವಿಧ ಯೋಜನೆಗಳು ಭದ್ರತೆ ಒದಗಿಸುತ್ತವೆ. ಪ್ರತಿಫಲ ಬ್ಯಾಂಕಿಗಿಂತಲೂ ಸ್ವಲ್ಪ ಹೆಚ್ಚು. ಆದರೆ ನಗದೀಕರಣ ಮಾತ್ರ ಕಷ್ಟಸಾಧ್ಯ.

ಜನಸಾಮಾನ್ಯರ ಅಗತ್ಯಗಳೆಲ್ಲವನ್ನೂ ಪೂರೈಸುವ ಆಶಾಕಿರಣವಾಗಿ 'ಪರಸ್ಪರ ನಿಧಿ'ಗಳು ಜನ್ಮತಾಳಿದವು. ಪರಸ್ಪರ ನಿಧಿಗಳು ಜನಸಾಮಾನ್ಯರಿಗೆ ಅಗತ್ಯವಾದ ಭದ್ರತೆ, ಸುಲಭ ನಗದೀಕರಣ ಹಾಗೂ ಹೆಚ್ಚಿನ ಪ್ರತಿಫಲ ನೀಡುವ ಭರವಸೆಗಳೊಂದಿಗೆ ಬಂಡವಾಳ ಮಾರುಕಟ್ಟೆಯನ್ನು ಪ್ರವೇಶಿಸಿದವು.

ಶೇರು ಮಾರುಕಟ್ಟೆಯಲ್ಲಿ ನೇರವಾಗಿ ಪ್ರವೇಶಿಸಲು ಹಿಂಜರಿಯುವ ಜನರಿಗೆ ವರದಾನ ಈ 'ಪರಸ್ಪರ ನಿಧಿಗಳು' ಎನ್ನಲು ಅಡ್ಡಿಇಲ್ಲ.

'ಪರಸ್ಪರ ನಿಧಿ'—ಹೆಸರೇ ಸೂಚಿಸುವಂತೆ ಪರಸ್ಪರರಿಗೆ ಅನುಕೂಲವಾಗುವಂತೆ ಹಲವರಿಂದ ನಿಧಿ ಸೇರಿಸಿ ದೊಡ್ಡ ಮೊತ್ತ ಮಾಡಿ, ಅದನ್ನು ಲಾಭದಾಯಕವಾದ ಶೇರುಗಳಲ್ಲಿ ತೊಡಗಿಸಿ, ಬಂದ ಲಾಭಾಂಶದಲ್ಲಿ ನಿರ್ವಹಣಾ ವೆಚ್ಚವನ್ನು ಕಳೆದು ಉಳಿದಿದ್ದನ್ನು ಎಲ್ಲ ಹೂಡಿಕೆದಾರರಲ್ಲಿ ಅವರವರ ಹೂಡಿಕೆಗೆ ತಕ್ಕಂತೆ ಹಂಚುವದು. ಐನೂರು/ಸಾವಿರ ಅಥವಾ ಅದರ ಗುಣಕಗಳಲ್ಲಿ ಹಣವನ್ನು ಸಂಗ್ರಹಿಸುವದು.

ಇಲ್ಲಿ ಚಿಕ್ಕ ಹಣ ಹೂಡಿಕೆದಾರರಿಗೆ ಶೇರು ಮಾರುಕಟ್ಟೆಯ ಏರಿಳಿತಗಳನ್ನು, ಸ್ಥಿತಿ-ಗತಿಗಳನ್ನು ಅಭ್ಯಸಿಸುವ ತೊಂದರೆ ಇಲ್ಲ. ಹೆಚ್ಚು ಹಣವನ್ನು ಹೂಡಬೇಕಾದ ಪ್ರಮೇಯವಿಲ್ಲ. ಹೂಡಿದ ಹಣವೆಲ್ಲವೂ ಕಳೆದುಹೋಗುವ ಭಯವೂ ಇಲ್ಲ. ಆದರೆ ಪ್ರತಿಫಲ ಮಾತ್ರ ಬ್ಯಾಂಕುಗಳಲ್ಲಿ ಹೂಡಿದ ಹಣಕ್ಕೆ ಸಿಗುವ ಪ್ರತಿಫಲದ ಇಮ್ಮಡಿ, ಮುಮ್ಮಡಿ !

ಶೇರುಗಳಲ್ಲಿ ಹಣ ತೊಡಗಿಸುವದರಿಂದ ಕಡಿಮೆ ಅವಧಿಯಲ್ಲಿಯೂ ಅತಿ ಹೆಚ್ಚು ಪ್ರತಿಫಲ ದೊರೆಯಬಹುದು. ಅಥವಾ ಹೂಡಿದ ಹಣವೂ ಕಳೆದು ಹೋಗಿ ಹಾನಿಯೂ ಆಗಬಹುದು. ಆದ್ದರಿಂದ ಈ ಹೂಡಿಕೆಯಲ್ಲಿ ಹೆಚ್ಚು ಅಪಾಯ ಸಂಭವ ಮತ್ತು ಹೆಚ್ಚು ಪ್ರತಿಫಲ.

ಆದರೆ ಪರಸ್ಪರ ನಿಧಿಗಳಲ್ಲಿ ಕಡಿಮೆ ಅಪಾಯ, ಸ್ವಲ್ಪ ಹೆಚ್ಚು ಪ್ರತಿಫಲ.

ಈ ಎಲ್ಲ ಸೌಲಭ್ಯ ಹಾಗೂ ಅನುಕೂಲತೆಗಳನ್ನು ಸಣ್ಣ ಹೂಡಿಕೆದಾರರಿಗೆ ನೀಡುವ ಆಕರ್ಷಣೆಯೊಂದಿಗೆ ಪರಸ್ಪರ ನಿಧಿಗಳು ಬಂಡವಾಳ ಮಾರುಕಟ್ಟೆಯನ್ನು ಪ್ರವೇಶಿಸಿದವು,

ಪರಸ್ಪರ ನಿಧಿಗಳ ಜಾಗತಿಕ ಐತಿಹ್ಯದತ್ತ ಒಂದು ನೋಟ ಬೀರಿದರೆ, ಪುರಾತನ ಕಾಲದಲ್ಲಿ ವಾಣಿಜ್ಯದ ಕಲ್ಪನೆಯ ಆರಂಭಿಕ ಹಂತದಲ್ಲಿಯೆ ಈಜಿಪ್ತಿನಲ್ಲಿ ಅಪಾಯದ ತೀವ್ರತೆಯನ್ನು ಕಡಿಮೆ ಮಾಡುವ ಉದ್ದೇಶದಿಂದ ಶೇರುಗಳನ್ನು ಸಾಮೂಹಿಕವಾಗಿ ಮಾರುವದು, ಕೊಳ್ಳುವದು ಮಾಡುತ್ತಿದ್ದರೆಂದು ತಿಳಿದುಬರುತ್ತದೆ.

ಕ್ರಿ.ಶ. 1822ರಲ್ಲಿ ಜನ್ಮ ತಳೆದ 'ಸೊಸಿಯಲ್ ಜನರಲ್ ಡಿ ಬೆಲ್ಜಿಗ್' ಎಂಬ ಸಂಸ್ಥೆ ಅಪಾಯವನ್ನು ಹಂಚಿಕೊಳ್ಳುವ ಪರಿಕಲ್ಪನೆಯನ್ನು ಹುಟ್ಟುಹಾಕಿತು.

ಆದರೆ ಕ್ರಿ.ಶ. 1868ರಲ್ಲಿ ಜನ್ಮ ತಳೆದ ದಿ ಫಾರಿನ್ ಅಂಡ್ ಕಲೋನಿಯಲ್ ಗವರ್ನ್‌ಮೆಂಟ್ ಟ್ರಸ್ಟ್ ಆಫ್ ಲಂಡನ್ ಎಂಬ ಸಂಸ್ಥೆಯನ್ನು ಪರಸ್ಪರ ನಿಧಿಗಳ ಅಧಿಕೃತ ಆದ್ಯಪ್ರವರ್ತಕ ಎನ್ನಬಹುದು.

ಕ್ರಿ.ಶ. 1930ರಲ್ಲಿ ಅಮೇರಿಕೆಯಲ್ಲಿ ಹಲವಾರು (ನಿರ್ದಿಷ್ಟ ಅವಧಿಯ, ನಿರ್ದಿಷ್ಟ ಹಣ ಹೂಡಿಕೆಯ) ಪರಸ್ಪರ ನಿಧಿಗಳು ಕಾರ್ಯಾರಂಭ ಮಾಡಿದವು.

ನಮ್ಮ ದೇಶದಲ್ಲಿ ಪ್ರಾರಂಭವಾದ ಪ್ರಪ್ರಥಮ ಪರಸ್ಪರ ನಿಧಿ ಎಂದರೆ ಸರಕಾರಿ ಸ್ವಾಮ್ಯದ, ಕ್ರಿ.ಶ. 1963ರಲ್ಲಿ ಸಂಸತ್ತಿನ ಕಾಯ್ದೆಯೊಂದರ ಮೂಲಕ ಸ್ಥಾಪಿಸಲಾದ ಯೂನಿಟ್ ಟ್ರಸ್ಟ್ ಆಫ್ ಇಂಡಿಯ (ಯುಟಿಐ) ಎನ್ನಬಹುದು. ಇದು ಭಾರತದಲ್ಲಿ ಅತ್ಯಂತ ಜನಪ್ರಿಯ. ಹಲವಾರು ಸಾವಿರ ಕೋಟಿ ಹಣ ಸಂಗ್ರಹಿಸಿದ ಮತ್ತು ಅತಿ ಹೆಚ್ಚು ಚಿಕ್ಕ ಹೂಡಿಕೆದಾರರನ್ನು ಹೊಂದಿದ ಪರಸ್ಪರ ನಿಧಿ ಎಂದರೆ ಯುಟಿಐ.

ಹೂಡಿಕೆದಾರರ ಬೇರೆ ಬೇರೆ ಅವಶ್ಯಕತೆಗಳಿಗೆ ತಕ್ಕಂತೆ ಬೇರೆ ಬೇರೆ ರೀತಿಯ ಪರಸ್ಪರ ನಿಧಿ ಯೋಜನೆಗಳಿವೆ.

ಪರಸ್ಪರ ನಿಧಿಗಳನ್ನು ಸಾಮಾನ್ಯವಾಗಿ ನಾಲ್ಕು ವಿಧವಾಗಿ ವಿಂಗಡಿಸಬಹುದು :

ನಿರಂತರ (ಓಪನ್ ಎಂಡೆಡ್) ಮತ್ತು ಕ್ಲಿಪ್ತಾವಧಿಯ (ಕ್ಲೋಸ್ ಎಂಡೆಡ್) ನಿಧಿಗಳು.

ಅವಧಿ ಹಾಗೂ ಹೂಡುವ ಹಣ ನಿರ್ದಿಷ್ಟವಾಗಿದ್ದರೆ ಅದು ಕ್ಲಿಪ್ತಾವಧಿಯ ನಿಧಿ.

ಉದಾ : 5, 7, 10, 15 ವರ್ಷಗಳ ನಿರ್ದಿಷ್ಟ ಅವಧಿಯ ಹಲವಾರು ಯೋಜನೆಗಳು ಕ್ಲಿಪ್ತಾವಧಿಯ ನಿಧಿಗಳು.

ಅವಧಿ ಅನಿರ್ದಿಷ್ಟವಾಗಿದ್ದರೆ ಅದು ನಿರಂತರ ನಿಧಿ.

### ಆದಾಯ ಮತ್ತು ವೃದ್ಧಿ ಉದ್ದೇಶದ ನಿಧಿ

ಕ್ರಮವಾಗಿ ನಿಯತಕಾಲಕ್ಕೆ ಆದಾಯವನ್ನು ಹೂಡಿಕೆದಾರರಿಗೆ ಹಂಚುವ ಯೋಜನೆಗಳು.

ಉದಾ : ಭಾರತೀಯ ಸ್ಟೇಟ್ ಬ್ಯಾಂಕ್ ಪರಸ್ಪರ ನಿಧಿಯ ಮ್ಯಾಗ್ನಮ್ ರೆಗ್ಯುಲರ್ ಇನ್‌ಕಮ್ ಸ್ಕೀಮ್, ಯು. ಟಿ. ಐ. ದ ಮಾಸಿಕ ಆದಾಯ ಯೋಜನೆ ಮುಂತಾದವು.

ಇದಕ್ಕಾಗಿ ಪರಸ್ಪರ ನಿಧಿಗಳು ಹೂಡಿಕೆದಾರರ ಹಣವನ್ನು ನಿರ್ದಿಷ್ಟ ಆದಾಯ ನೀಡುವ ಯೋಜನೆಗಳಲ್ಲಿ ತೊಡಗಿಸಬೇಕಾಗುತ್ತದೆ. ಇದರಿಂದ ನಿರ್ದಿಷ್ಟ ಆದಾಯ ದೊರೆತರೂ ಪ್ರತಿಫಲ ಕಡಿಮೆ.

ವೃದ್ಧಿ ಯೋಜನೆಗಳಲ್ಲಿ ಹಣವನ್ನು ಅಧಿಕ ಪ್ರತಿಫಲವನ್ನು ನೀಡುವ ಹೆಚ್ಚಿನ ಅಪಾಯದ ಸಾಮ್ಯ ಶೇರುಗಳಲ್ಲಿ ತೊಡಗಿಸುವುವು. ಹೆಚ್ಚು ಪ್ರತಿಫಲ ಸಿಗುವ ಸಂಭವ ಜಾಸ್ತಿ ಇದ್ದರೂ ಕೆಲವೊಮ್ಮೆ ಹಾನಿಯೂ ಆಗಬಹುದು.

ಉದಾ : ಭಾ. ಸ್ಟೇ. ಬ್ಯಾ. ಪ. ನಿ. ಯ ಮ್ಯಾಗ್ನಮ್ ಮಲ್ಟಿಪ್ಲೈಯರ್ ಸ್ಕೀಮ್ ಮತ್ತು ಮ್ಯಾಗ್ನಮ್ ಮಲ್ಟಿಪ್ಲೈಯರ್ ಪ್ಲಸ್ ಸ್ಕೀಮ್-93 ಮತ್ತು ಯು. ಟಿ. ಐ. ದ ಮಾಸ್ಟರ್ ಗ್ರೋತ್ ಮುಂತಾದವು.

### ಕರ ಉಳಿತಾಯ ಯೋಜನೆಗಳು

ಈ ಯೋಜನೆಗಳ ಅಡಿಯಲ್ಲಿ ಹಣ ಹೂಡಿದವರಿಗೆ ಆದಾಯ ಕರ ಅಧಿನಿಯಮದ ಸೆಕ್ಷನ್ 80ಸಿಸಿಬಿ/ಸೆಕ್ಷನ್88 ಅಡಿಯಲ್ಲಿ ಆದಾಯ ಕರ ವಿನಾಯ್ತಿ ದೊರೆಯುತ್ತದೆ. ರೂ 10,000 ವರೆಗೆ ಹೂಡಿದ ಹಣಕ್ಕೆ ಮಾತ್ರ ಶೇಕಡಾ 20ರಂತೆ ಕರ ವಿನಾಯ್ತಿ ದೊರೆಯುತ್ತದೆ. ಆದರೆ ಮೂರು ವರ್ಷಗಳ ಕನಿಷ್ಠ ಅವಧಿಯ ನಂತರ ಮರು ಖರೀದಿಗೆ ನೀಡಿದಾಗ ಮುಖಬೆಲೆಯ ಶೇ. 20ರಂತೆ ಕರ ಮುರಿದುಕೊಳ್ಳಲಾಗುವುದು. ಈ ಯೋಜನೆಯಡಿ ಸಂಗ್ರಹಿಸಿದ ಹಣವನ್ನು ಸಾಮ್ಯ ಶೇರುಗಳಲ್ಲಿ ತೊಡಗಿಸಬೇಕೆಂಬುದು ಸರಕಾರಿ ನಿಯಮ.

ಉದಾ : ಭಾರತೀಯ ಸ್ಟೇಟ್ ಬ್ಯಾಂಕಿನ ಮ್ಯಾಗ್ನಮ್ ಗಿಫ್ಟ್ಸ—92, ಯು. ಟಿ. ಐ. ಯ ಮಾಸ್ಟರ್ ಈಕ್ವಿಟಿ ಯೋಜನೆ (ಎಂಇಪಿ), ಕ್ಯಾನ್ ಬ್ಯಾಂಕ್ ಪ.ನಿ.ಯ ಕ್ಯಾನ್ ಪೆಪ್ ಸರಣಿಗಳು.

ಅಂತರ್ರಾಷ್ಟ್ರೀಯ ಮಟ್ಟದಲ್ಲಿ ಹಣ ಹೂಡುವ ಯೋಜನೆ ನಾಲ್ಕನೆಯ ವಿಧ.

ನಮ್ಮ ದೇಶದಲ್ಲಿ ಇತ್ತೀಚಿನವರೆಗೂ ಬಂಡವಾಳ ಮಾರುಕಟ್ಟೆಯಲ್ಲಿ ಹೇಳಿಕೊಳ್ಳುವಂತಹ ಪೈಪೋಟಿ ಇರಲಿಲ್ಲ.

ಪರಸ್ಪರರ ನಿಧಿ ಸ್ಥಾಪಿಸಲು 1987ರಲ್ಲಿ ಭಾರತೀಯ ಸ್ಟೇಟ್ ಬ್ಯಾಂಕಿಗೆ ಅನುಮತಿ ನೀಡುವದರೊಂದಿಗೆ ಪೈಪೋಟಿ ಆರಂಭವಾಯಿತು.

ಅನಂತರ ರಾಷ್ಟ್ರೀಕೃತ ಬ್ಯಾಂಕುಗಳಾದ ಕೆನರಾ ಬ್ಯಾಂಕ್, ಬ್ಯಾಂಕ್ ಆಫ್ ಇಂಡಿಯಾ, ಇಂಡಿಯನ್ ಬ್ಯಾಂಕ್, ಪಂಜಾಬ್ ನ್ಯಾಶನಲ್ ಬ್ಯಾಂಕ್ ಮುಂತಾದವು ಕೂಡ ತಮ್ಮತಮ್ಮ ಪರಸ್ಪರ ನಿಧಿಗಳೊಂದಿಗೆ ಮಾರುಕಟ್ಟೆಯನ್ನು ಪ್ರವೇಶಿಸಿದವು.

ಹಾಗೆಯೇ ಹಣಕಾಸು ರಂಗದ ಇತರ ಸಂಸ್ಥೆಗಳಾದ ಜೀವ ವಿಮಾ ನಿಗಮ, ಸಾಮಾನ್ಯ ವಿಮಾ ನಿಗಮ ಸಂಸ್ಥೆಗಳೂ ಪರಸ್ಪರ ನಿಧಿಗಳನ್ನು ಆರಂಭಿಸಿದವು.

ಅತ್ಯಂತ ಚಾಣಾಕ್ಷ ಪರಸ್ಪರ ನಿಧಿಗಳೆಂದು ಅಂತರ್ರಾಷ್ಟ್ರೀಯ ಖ್ಯಾತಿ ಹೊಂದಿದ ಪರಸ್ಪರ ನಿಧಿಗಳಾದ ಮಾರ್ಗನ್ ಸ್ಟಾನ್ಲೆ, ಟಾರಾಸ್, ಆಪಲ್ ಇಂಡಸ್ಟ್ರೀಸ್ ಮುಂತಾದ ಖಾಸಗಿ ಪರಸ್ಪರ ನಿಧಿಗಳಿಗೂ ಅನುಮತಿ ದೊರೆತ ಮೇಲೆ ಬಂಡವಾಳ ಮಾರುಕಟ್ಟೆಯಲ್ಲಿ ತೀವ್ರ ಪೈಪೋಟಿ ಆರಂಭವಾಯ್ತು.

ಆದರೆ ಭಾರತೀಯ ಬಂಡವಾಳ ಮಾರುಕಟ್ಟೆಯನ್ನು ಪ್ರವೇಶಿಸಿದ ಹೆಚ್ಚಿನ ಪರಸ್ಪರ ನಿಧಿಗಳು (ವಿದೇಶಿ ನಿಧಿಗಳೂ ಸೇರಿ) ವಿಫಲವಾಗಿವೆಯೇನೊ ಎಂದೆನ್ನಿಸುತ್ತದೆ.

ಭದ್ರತೆ, ಸುಲಭ ನಗದೀಕರಣ ಹಾಗೂ ಬಂಡವಾಳ ವೃದ್ಧಿ/ಅಧಿಕ ಪ್ರತಿಫಲ ನೀಡುವ ಭರವಸೆಯೊಂದಿಗೆ ಮಾರುಕಟ್ಟೆ ಪ್ರವೇಶಿಸಿದ ಪರಸ್ಪರ ನಿಧಿಗಳು ತಮ್ಮ ಈ ವಾಗ್ದಾನವನ್ನು ಈಡೇರಿಸುವಲ್ಲಿ ಸೋತು ಹೋಗಿವೆ (ಕೆಲ ಯೋಜನೆಗಳು ಮಾತ್ರ ಅಪವಾದವಾಗಿರಬಹುದು).

[18ನೇ ಪುಟ ನೋಡಿ]

# ಕೃಷಿ ಉದರಿಯ ಭವಿಷ್ಯ

**ಅನಿರುದ್ಧ ಕುಲಕರ್ಣಿ**

ಭಾರತೀಯ ಸ್ಟೇಟ್ ಬ್ಯಾಂಕ್, ಸಿ. ವಿ. ರಾಮನ್ ನಗರ ಶಾಖೆ, ಬೆಂಗಳೂರು

ಕೃಷಿಯನ್ನೇ ಒಂದು ಉದ್ದಿಮೆ ಎಂದು ಪರಿಗಣಿಸಿ, ಅದಕ್ಕಿರುವ ಮಹತ್ತ್ವವನ್ನು ಗಮನಿಸಿ, ರಾಜಕೀಯ ಹಸ್ತಕ್ಷೇಪದಿಂದ ಮುಕ್ತವಾದ ಸಾಲಗಳನ್ನು ನೀಡಿ, ರೈತರನ್ನು ಪ್ರೇರೇಪಿಸುವುದಾದರೆ, ಬ್ಯಾಂಕುಗಳು ಈ ಕ್ಷೇತ್ರದಲ್ಲಿ ಅಗಾಧವಾದ ಸೇವೆ ಸಲ್ಲಿಸಬಹುದಾಗಿದೆ.

ಕೃಷಿ ಉದರಿಯ ಭವಿಷ್ಯದ ಬಗ್ಗೆ ವಿಚಾರ ಮಾಡುವುದಕ್ಕೆ ಮೊದಲು ಕೃಷಿ ರಂಗಕ್ಕೆ ಈಗಿರುವ ಸಾಲದ ಸ್ವರೂಪದ ಸ್ಥೂಲ ಪರಿಚಯ ಮಾಡಿಕೊಳ್ಳೋಣ.

**1 ಸಾಹುಕಾರಿ ಸಾಲಗಳು :** ಹಳ್ಳಿಗಳಲ್ಲಿ ರೈತರು ತಾವು ಕೈಗೊಳ್ಳುವ ಕೃಷಿ ಚಟುವಟಿಕೆಗಳಿಗೆ ಹಣವನ್ನು ಹಳ್ಳಿಗಳ ಸಾಹುಕಾರರಿಂದಲೇ ಪಡೆಯುವುದರಲ್ಲಿ ಆಸಕ್ತಿ ಹೊಂದಿದ್ದಾರೆ. ಕಾರಣ ಇಷ್ಟೇ—ಈ ತರಹದ ಸಾಲಗಳನ್ನು ಪಡೆಯುವುದು ಬಹಳ ಸುಲಭ ಹಾಗೂ ಈ ಸಾಲಗಳಿಗೆ ಇತರೆ ಸಾಲಗಳಲ್ಲಿ - ಬೇಕಾಗಿರುವಂತೆ ಕ್ಲಿಷ್ಟಕರವಾದ ಕಾಗದಪತ್ರಗಳ ಅವಶ್ಯಕತೆ ಇಲ್ಲ. ತೆಗೆದುಕೊಳ್ಳುವವ ಹಾಗೂ ಕೊಡುವವ ಒಬ್ಬರಿಗೊಬ್ಬರ ಪರಿಚಯ ಇದ್ದರೆ ಸಾಕು. ಆದರೆ ಈ ಬಗೆಯ ಸಾಲಗಳಲ್ಲಿ ರೈತರು ತಮ್ಮ ಅಜ್ಞಾನದಿಂದಾಗಿ ಮೋಸ ಹೋಗುವ ಸಂದರ್ಭಗಳೇ ಹೆಚ್ಚು.

**2 ಸಹಕಾರಿ ಬ್ಯಾಂಕುಗಳಿಂದ ಸಾಲ :** ಈ ಬ್ಯಾಂಕುಗಳು ರೈತರಿಗೆ ಮುಖ್ಯವಾಗಿ ಎರಡು ಬಗೆಯ ಸಾಲಗಳನ್ನು ನೀಡುತ್ತವೆ. ಅಲ್ಪಾವಧಿ ಸಾಲಗಳು ಮತ್ತು ಮಧ್ಯಮಾವಧಿ ಸಾಲಗಳು. ಅಲ್ಪಾವಧಿ ಸಾಲಗಳನ್ನು ಕೃಷಿ ಚಟುವಟಿಕೆಗಳಿಗೆ ಬೇಕಾಗುವ ಜಮೀನಿನ ತಯಾರಿಕೆಯಿಂದ ಹಿಡಿದು ಬೆಳೆಯ ಕಟಾವಿನವರೆಗೆ ಬೇಕಾದ ತುರ್ತುಕಾರ್ಯಗಳಿಗೆ ಕೊಡಲಾಗುತ್ತದೆ. ಮಧ್ಯಮಾವಧಿ ಸಾಲಗಳು 3ರಿಂದ 5 ವರ್ಷಗಳಲ್ಲಿ ತೀರಿಸಬೇಕಾದ ಸಾಲಗಳು. ಇವು ಮುಖ್ಯವಾಗಿ ಕೃಷಿ ಚಟುವಟಿಕೆಗಳಿಗೇ ಪರೋಕ್ಷವಾಗಿ ಬೇಕಾಗುವ ಕಾರ್ಯಗಳಿಗೆ ಕೊಡಲಾಗುತ್ತದೆ. ಉದಾಹರಣೆಗೆ ವಿದ್ಯುತ್ ಪಂಪ್ ಖರೀದಿ ಅಥವಾ ಟ್ರ್ಯಾಕ್ಟರ್ ಖರೀದಿ ಮುಂತಾದವಕ್ಕೆ. ಸಹಕಾರಿ ಬ್ಯಾಂಕುಗಳ ಸಾಲಗಳಲ್ಲಿ ಪ್ರಾಥಮಿಕ ಸಹಕಾರಿ ಬ್ಯಾಂಕುಗಳು, ರಾಜ್ಯ ಸಹಕಾರಿ ಬ್ಯಾಂಕುಗಳು ಕೇಂದ್ರ ಸಹಕಾರಿ ಬ್ಯಾಂಕುಗಳು ಒಂದಕ್ಕೊಂದು ಪೂರಕವಾಗಿ ಕಾರ್ಯ ನಿರ್ವಹಿಸುತ್ತಿವೆ.

**3 ಭೂ ಅಭಿವೃದ್ಧಿ ಬ್ಯಾಂಕುಗಳು :** ಇವು ಮುಖ್ಯವಾಗಿ ದೀರ್ಘಾವಧಿ ಸಾಲಗಳನ್ನು ರೈತರಿಗೆ ನೀಡುತ್ತವೆ. ಈ ಬ್ಯಾಂಕುಗಳು ಇತರೆ ಬ್ಯಾಂಕುಗಳ ಮೂಲಕ ಪರೋಕ್ಷ ಸಾಲಗಳನ್ನೂ ನೀಡುತ್ತವೆ.

**4 ಗ್ರಾಮೀಣ ಬ್ಯಾಂಕುಗಳು :** ಇವು ಹೆಸರೇ ಹೇಳುವಂತೆ ಗ್ರಾಮೀಣ ಪ್ರದೇಶದಲ್ಲೇ ಇರುವ ಬ್ಯಾಂಕುಗಳು. ರೈತರಿಗೆ ಬೇಕಾಗುವ ಪ್ರಾಯಶಃ ಎಲ್ಲ ಕೃಷಿ ಚಟುವಟಿಕೆಗಳಿಗೆ ಹಾಗೂ ಇತರೆ ಪೂರಕ ಚಟುವಟಿಕೆಗಳಿಗೆ ಧನಸಹಾಯ ಮಾಡುತ್ತಿವೆ. ಈಗ ಕೃಷಿರಂಗಕ್ಕೆ ಕೊಡಲಾಗುತ್ತಿರುವ ಸಾಲದ ಬಹು ಪ್ರಮಾಣ ಈ ಬ್ಯಾಂಕುಗಳಿಂದಲೇ ಕೊಡಲಾಗುತ್ತಿದೆ.

**5 ರಾಷ್ಟ್ರೀಕೃತ ಬ್ಯಾಂಕುಗಳು :** ಒಂದು ಅಧ್ಯಯನದಂತೆ ಸಹಕಾರಿ ಬ್ಯಾಂಕುಗಳ ಸಾಲ ನಿರ್ವಹಣೆಯಲ್ಲಿ ಹಲವು ನ್ಯೂನತೆಗಳು ಕಂಡುಬಂದವು. ಸಾಲದ ನಿರ್ವಹಣೆ ಮತ್ತು ವಸೂಲಾತಿಯ ವಿಷಯಗಳ ಬಗೆಗೆ. ಕಾರಣ ಏನೆಂದರೆ—ಈ ಬ್ಯಾಂಕುಗಳು ರೈತರಿಗೆ ತೀರ ಹತ್ತಿರವಾಗಿದ್ದುದು. ಜೊತೆಗೆ ಈ ಬ್ಯಾಂಕುಗಳ ಬಹುಪಾಲು ಸಾಲದ ಭಾಗ ಕೇವಲ ಶ್ರೀಮಂತ ರೈತರ ಪಾಲಾಗುತ್ತಿದೆ ಎಂಬ ಆರೋಪವೂ ಇದ್ದಿತು. ಈ ಹಿನ್ನೆಲೆಯಲ್ಲಿ ರಾಷ್ಟ್ರೀಕರಣಗೊಂಡ ಬ್ಯಾಂಕುಗಳು ಸರಕಾರಕ್ಕೆ ತುಂಬಾ ಅನುಕೂಲಕರವಾಗಿ ಬಂದವು. ವಾಣಿಜ್ಯ ಬ್ಯಾಂಕುಗಳ ಪೈಕಿ ಭಾರತೀಯ ಸ್ಟೇಟ್ ಬ್ಯಾಂಕಿಗೆ ಕೃಷಿಸಾಲ ನೀಡುವ ಬಹುಪಾಲು ಹೊಣೆ ನೀಡಲಾಯಿತು ಈ ಬ್ಯಾಂಕುಗಳು ಕೂಡಾ ರೈತರಿಗೆ ಕೃಷಿ ಚಟುವಟಿಕೆಗಳಿಗೆ ಬೇಕಾಗುವ ಅಲ್ಪಾವಧಿ ಕೃಷಿ ಸಾಲ, ಹಾಗು ಮಧ್ಯಮಾವಧಿ ಕೃಷಿ ಸಾಲಗಳನ್ನು ನೀಡುತ್ತಿವೆ. ಅಲ್ಲದೆ ಕೃಷಿಗೆ ಸಂಬಂಧಿಸಿದ ಕೃಷಿಗೆ ಅನುರೂಪವಾಗಿ ಬರುವ ಚಟುವಟಿಕೆಗಳಿಗೆ ಕೂಡಾ ಸಾಲ ನೀಡುತ್ತಿವೆ. ಕೃಷಿ ಸಾಲದ ಮಹತ್ವವನ್ನು ಮನಗಂಡು ಕೃಷಿಗೆ ಉತ್ತೇಜನ ನೀಡಲು ಮುಖ್ಯ ಸ್ಥಳಗಳಲ್ಲಿ ಕೃಷಿ ಅಭಿವೃದ್ಧಿ ಶಾಖೆಗಳು ತೆರೆಯಲ್ಪಟ್ಟಿದ್ದು, ಇತರ ಶಾಖೆಗಳಲ್ಲೂ ಕೃಷಿ ಬ್ಯಾಂಕಿಂಗ್ ವಿಭಾಗಗಳನ್ನು ತೆರೆಯಲಾಗಿದೆ. ಇದು ಕೃಷಿ ಹಾಗೂ ಅದರ ಮಹತ್ವದ ಬಗ್ಗೆ ರಾಷ್ಟ್ರೀಕೃತ ಬ್ಯಾಂಕುಗಳಿಗಿರುವ ಕಾಳಜಿ ಹಾಗೂ ಕಳಕಳಿಯನ್ನು ವ್ಯಕ್ತಪಡಿಸುತ್ತದೆ.

**6 ನಬಾರ್ಡ್ :** ಇದು ಕೃಷಿ ಹಾಗೂ ಗ್ರಾಮೀಣ ಅಭಿವೃದ್ಧಿ

ಗೆಂದೇ ಜನ್ಮತಳೆದ ರಾಷ್ಟ್ರೀಯ ಮಟ್ಟದ ಬ್ಯಾಂಕು ಹಾಗೂ ಸಂಪೂರ್ಣವಾಗಿ ಸರಕಾರದ ಒಡೆತನದಲ್ಲಿರುವ ಸಂಸ್ಥೆ. ಈ ಮೊದಲು ಕೃಷಿಗೆ ಸಂಬಂಧಿಸಿದ ನೀತಿ, ನಿರ್ದೇಶ ಹಾಗೂ ಮಾರ್ಗ ದರ್ಶನಗಳನ್ನು ಸರಕಾರಿ ಒಡೆತನದ ಇತರೆ ಹಲವಾರು ಸಂಸ್ಥೆಗಳು ನೀಡುತ್ತಲಿದ್ದವು. ಕೆಲಸಾರಿ ಈ ನಿರ್ದೇಶಗಳು ಒಂದಕ್ಕೊಂದು ಪೂರಕವಾಗಿರುತ್ತಿರಲಿಲ್ಲ. ಈ ನ್ಯೂನತೆಯನ್ನು ಹೋಗಲಾಡಿಸಲು ಕೃಷಿಗೆ ಸಂಬಂಧಪಟ್ಟ ರಾಷ್ಟ್ರೀಯ ಮಟ್ಟದಲ್ಲಿ ಕಾರ್ಯನಿರ್ವಹಿಸುವ ಹಾಗೂ ಕೃಷಿಗೇ ಸಂಪೂರ್ಣ ಮೀಸಲಾದ ಸಂಸ್ಥೆಯಾಗಿ ನಬಾರ್ಡ್ ಜನ್ಮ ತಳೆಯಿತು. ಇದು ಗ್ರಾಮೀಣ ಬ್ಯಾಂಕುಗಳ ಕೆಲಸ ಕಾರ್ಯಗಳನ್ನು ಗಮನಿಸುತ್ತಲೇ, ಸರಕಾರಗಳಿಗೆ ಹಾಗೂ ವಾಣಿಜ್ಯ ಬ್ಯಾಂಕುಗಳಿಗೆ ಪುನರ್ಧನ ಸಹಾಯವನ್ನು ನೀಡುತ್ತದೆ. ಈ ಪುನರ್ಧನವನ್ನು ಪಡೆಯಲು ಕೆಲವು ಷರತ್ತುಗಳನ್ನು ಪಾಲಿಸ ಬೇಕಾಗುತ್ತದೆ. ಕೊಟ್ಟಸಾಲಕ್ಕೆ ಸಾಲದ ವಸೂಲಾತಿಯ ಅನುಪಾತ ಇಂತಿಷ್ಟು ಇರಬೇಕೆಂಬುದು ಅವುಗಳಲ್ಲೊಂದು. ಇತ್ತೀಚೆಗೆ ಕರ್ನಾಟಕ ಸರಕಾರ ಮತ್ತು ನಬಾರ್ಡ್ ನಡುವೆ ಈ ವಿಷಯದಲ್ಲಿ ಸಮಸ್ಯೆಯೊಂದು ಬಂದಿತ್ತು. ಆದರ ಮೂಲಕಾರಣ ಕರ್ನಾಟಕ ಸರಕಾರದ ರೈತರ ಸಹಕಾರಿ ಸಂಘಗಳ ಸಾಲದ ಮೇಲಿನ ಬಡ್ಡಿ ಮನ್ನಾ ನಿರ್ಧಾರ. ಮಧ್ಯಸ್ಥಿಕೆಯಿಂದ ಈ ಸಮಸ್ಯೆಯನ್ನು ನೀಗ ಲಾಗಿದೆ.

ಒಟ್ಟಾರೆ ಪುನರ್ಧನ ನೀಡುವದರ ಮೂಲಕ ನಬಾರ್ಡ್ ಕೃಷಿ ಕ್ಷೇತ್ರಕ್ಕೆ ಅಪರೋಕ್ಷವಾಗಿ ಸಾಲಕೊಟ್ಟಂತೆ ಆಗಿದೆ.

ಹೀಗೆ ನೀತಿ ನಿರ್ದೇಶ, ಮಾರ್ಗದರ್ಶನಗಳ ನಡುವೆ ಹಲವಾರು ಸಂಘ ಸಂಸ್ಥೆಗಳು ಕೃಷಿ ಸಾಲಗಳನ್ನು ನೀಡಿ ನಿರ್ವಹಿಸುತ್ತಿವೆ. ಇದು ರೈತರ ಎಲ್ಲ ಅವಶ್ಯಕತೆಗಳನ್ನು ಸಂಪೂರ್ಣವಾಗಿ ಪೂರೈಸುತ್ತಿದೆ ಎಂದು ಹೇಳಲಾಗದಿದ್ದರೂ ತಕ್ಕಮಟ್ಟಿಗೆ ನಡೆಸಿಕೊಂಡು ಹೋಗುತ್ತಿದೆ.

ಈಗ ಮುಂದೇನು ? ಎಂಬ ಪ್ರಶ್ನೆಗೆ ಬರೋಣ. ಈ ಮುಂದೇನು ಎಂಬ ಪ್ರಶ್ನೆ ಯಾಕೆ ? ನನಗನ್ನಿಸಿದಂತೆ ಈಗ ರಾಷ್ಟ್ರದಲ್ಲಿ ಕಂಡುಬರುತ್ತಿರುವ ಆರ್ಥಿಕ ಉದಾರೀಕರಣ, ಸರಳೀಕರಣ, ಹಾಗೂ ವಿಶ್ವವ್ಯಾಪೀಕರಣದ ಹಿನ್ನೆಲೆಯಲ್ಲಿ ಈ ಪ್ರಶ್ನೆ ಬಂದಿದ್ದರೆ ಖಂಡಿತ ಇದನ್ನು ಮುಂದುವರಿಸಿಕೊಂಡು ಇದರಲ್ಲಿ ಇನ್ನೂ ಬದಲಾವಣೆಗಳನ್ನು ಹಾಗು ಅಭಿವೃದ್ಧಿ ಮಾಡಬೇಕು ಎಂಬುದೇ ಉತ್ತರ.

ಈ ಬದಲಾಗುತ್ತಿರುವ ಅರ್ಥವ್ಯವಸ್ಥೆಯಲ್ಲೂ ಕೃಷಿರಂಗ ತನ್ನ ಮಹತ್ವವನ್ನು ಉಳಿಸಿಕೊಳ್ಳುತ್ತದೆ. ನಮ್ಮ ದೇಶದ ಅರ್ಥ ವ್ಯವಸ್ಥೆಯ ಶೇಕಡ 70-75ರಷ್ಟು ಭಾಗ ಕೃಷಿಯ ತಳಹದಿಯ ಮೇಲೆಯೇ ನಿಂತಿದೆ. ಅರ್ಥವ್ಯವಸ್ಥೆಯ ವಿವಿಧ ಮುಖಗಳಾದ ಸ್ವಾವಲಂಬನೆ, ಉತ್ಪಾದನೋನ್ನತಿ ಮತ್ತು ಪ್ರಾದೇಶಿಕ ಅಸಮತೋಲದ ನಿವಾರಣೆಯಂಥ ವಿಷಯಗಳಿಗೇ ಮಹತ್ವ ಸಿಕ್ಕುವದು ಮುಖ್ಯವಾಗಿ ಕೃಷಿ ಕ್ಷೇತ್ರದ ಉನ್ನತಿಯನ್ನು ಅವಲಂಬಿಸಿದೆ.

ಇಂದು ನಮ್ಮ ಸಂತ್ರಮುತ್ತ ಆರ್ಥಿಕ ಉದಾರೀಕರಣ, ಸರಳೀಕರಣ ಹಾಗೂ ವಿಶ್ವವ್ಯಾಪೀಕರಣದ ಚರ್ಚೆ, ಗೋಷ್ಠಿ ಮತ್ತು ಫಲಾಫಲಗಳ ವಿಮರ್ಶೆ ನಡೆಯುತ್ತಿವೆ. ಅವಕ್ಕೆ ಅನುರೂಪವಾಗಿ ಎಷ್ಟೋ ಬದಲಾವಣೆಗಳೂ ಆಗುತ್ತಲಿವೆ. ಮುಂಗಡ ಪತ್ರಗಳನ್ನು ಕೂಡ ಈ ಆರ್ಥಿಕ ಉದಾರೀಕರಣದ ದೃಷ್ಟಿಯಿಂದಲೇ ಮಂಡಿಸಲಾಗುತ್ತಿದೆ. ಇಂದು ವಿದೇಶಗಳಿಂದ ವ್ಯಾಪಾರ ಮಂಡಳಿಗಳು ಬಂದು ನಮ್ಮ ವಿವಿಧ ರಾಜ್ಯಗಳನ್ನು ಸಂಪರ್ಕಿಸಿ ಬಂಡವಾಳ ಹೂಡುವದರಲ್ಲಿ ಆಸಕ್ತಿ ತೋರಿಸುತ್ತಿವೆ. ನಮ್ಮ ಸರಕಾರಗಳೂ ತುಂಬು ಮನಸ್ಸಿನಿಂದ ಇವುಗಳ ಸ್ವಾಗತ ಮಾಡುತ್ತಲಿವೆ. ಆದರೆ ಇವೆಲ್ಲ ಆರ್ಥಿಕ ಉದಾರೀಕರಣದ ಲಾಭ ಪಡೆದು ಔದ್ಯೋಗಿಕ ಕ್ಷೇತ್ರದಲ್ಲೇ ಹೆಚ್ಚು ಹೆಚ್ಚು ಬಂಡವಾಳ ಹೂಡಿ ತಮ್ಮ ಸ್ವಂತದ ಲಾಭವನ್ನು ಹೆಚ್ಚಿಸುವ ಹುನ್ನಾರದಲ್ಲಿವೆ ಎಂಬುದನ್ನು ನಾವು ಮನಗಾಣಬೇಕಿದೆ.

ನಮ್ಮ ದೇಶ ಕೇವಲ ಔದ್ಯೋಗಿಕವಾಗಿ ಅಭಿವೃದ್ಧಿ ಹೊಂದಿದರಷ್ಟೇ ಸಾಲದು. ದೇಶದಲ್ಲಿ ಕಂಡುಬರುತ್ತಿರುವ ಜನಸಂಖ್ಯಾ ಬೆಳವಣಿಗೆಯನ್ನು ನೋಡಿದರೆ ನಾವು ಔದ್ಯೋಗಿಕವಾಗಿ ಎಷ್ಟೇ ಪ್ರಗತಿ ಹೊಂದಿದರೂ ಬೆಳೆಯುತ್ತಿರುವ ಜನಸಂಖ್ಯೆ ಆದರ ಎಲ್ಲ ಫಲಗಳನ್ನೂ ನುಂಗಿಹಾಕುತ್ತಿದೆ.

ಹಲವಾರು ಕೋಟಿ ರೂಪಾಯಿಗಳನ್ನು ಔದ್ಯೋಗಿಕ ಕ್ಷೇತ್ರದಲ್ಲಿ ತೊಡಗಿಸಿ ಹಲವು ನೂರು ಜನರಿಗೆ ನಾವು ಉದ್ಯೋಗ ಕಲ್ಪಿಸಬಹುದಾದರೆ ಅದೇ ಮೊತ್ತವನ್ನು ನಾವು ಕೃಷಿರಂಗದಲ್ಲಿ ತೊಡಗಿಸಿದರೆ ಹಲವು ಲಕ್ಷ ಜನರಿಗೆ ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಉದ್ಯೋಗಾವಕಾಶ ಕಲ್ಪಿಸಬಹುದಾಗಿದೆ. ಕೃಷಿಯನ್ನು ನಾವು ಕೈಬಿಡುವ ಹಾಗೇ ಇಲ್ಲ. ಹಾಗೇ ಬ್ಯಾಂಕುಗಳು ಕೃಷಿಸಾಲನ್ನು ನಿಲ್ಲಿಸುವ ಹಾಗೇ ಇಲ್ಲ. ಕೃಷಿಯನ್ನು ನಾವು ಎರಡು ಭಾಗಗಳಲ್ಲಿ ವಿಂಗಡಿಸಬಹುದು. 1) ಸಾಂಪ್ರದಾಯಿಕ ಕೃಷಿ, 2) ಅಸಾಂಪ್ರದಾಯಿಕ ಕೃಷಿ. ಸಾಂಪ್ರದಾಯಿಕ ಕೃಷಿಗೇ ಈಗ ಬ್ಯಾಂಕುಗಳು ತಮ್ಮ ಬಹುಪಾಲು ಕೃಷಿಸಾಲ ನೀಡುತ್ತಿವೆ. ಇದು ಮುಖ್ಯವಾಗಿ ಆಹಾರದ ಬೆಳೆಗಳನ್ನು ಬೆಳೆಯುವದು. ರೇಷ್ಮೆ ಕೃಷಿ, ಕುರಿ ಕೋಳಿ ಸಾಕಾಣಿಕೆ, ಹೈನುಗಾರಿಕೆ ಮುಂತಾದವು. ಇವುಗಳನ್ನು ಕೂಡ ಇನ್ನಷ್ಟು ಉತ್ತಮಪಡಿಸಲು ಇನ್ನೂ ಹೆಚ್ಚು ಸಂಘಟಿತವಾಗಿ ಸಾಲ ಕೊಡಬೇಕಾಗಿದೆ. ದೊಡ್ಡ ಕುಟುಂಬಗಳು ಒಡೆದು ಚಿಕ್ಕ ಚಿಕ್ಕ ಕುಟುಂಬಗಳು ಅಸ್ತಿತ್ವದಲ್ಲಿ ಬರುತ್ತಿದ್ದಂತೆ ಜಮೀನುಗಳಲ್ಲೂ ಪಾಲುಗಳಾಗಿ ರೈತರಿಗೆ ಇಂದು ತೀರಾ ಚಿಕ್ಕ ಚಿಕ್ಕ ಜಮೀನಿನ ಒಡೆತನ ಸಿಕ್ಕಿದೆ. ಇದರಲ್ಲಿ ಅವರು ವೈಜ್ಞಾನಿಕವಾಗಿ ಕೃಷಿ ನಡೆಸಲು ಸಾಧ್ಯವಾಗುತ್ತಿಲ್ಲ. ಈ ದೋಷಗಳನ್ನು ಹೋಗಲಾಡಿಸಲು ಸಹಕಾರಿ ಕೃಷಿ ನಡೆಸುವದೇ ಸೂಕ್ತ. ಹಲವು ರೈತರನ್ನು ಒಟ್ಟುಗೂಡಿಸಿ ಅವರಿಂದ ಸಹಕಾರಿ ಕೃಷಿ ನಡೆಸಲು ಪ್ರೇರೇಪಿಸಿ ಅವರ ಒಟ್ಟಾರೆ ಅಗತ್ಯಗಳಿಗೆ ಸಾಲಸೌಲಭ್ಯ ನೀಡುವುದು ಒಳ್ಳೆಯದು.

ದೇಶದ ಆರ್ಥಿಕ ದೃಷ್ಟಿಯಿಂದ ಸಂಪ್ರದಾಯಿಕ ಕೃಷಿ ಮುಖ್ಯವಾದರೂ ಇತ್ತೀಚಿನ ದಿನಗಳಲ್ಲಿ ಅಸಾಂಪ್ರದಾಯಿಕ ಕೃಷಿ ಹೆಚ್ಚು ಪ್ರಾಮುಖ್ಯ ಪಡೆಯತೊಡಗಿದೆ. ಗ್ರಾಮೀಣ ಪ್ರದೇಶಗಳಲ್ಲಿ ಭೂ ಹೀನ ಕೃಷಿಕರು ಜಾಸ್ತಿಯಾಗುತ್ತಿದ್ದಂತೆ ಈ ತರಹದ ಕೃಷಿಗೆ ಮಹತ್ವ ಬಂದಿದೆ. ಇದು ಒಂದು ರೀತಿಯಲ್ಲಿ ಕೃಷಿಗೆ ಅನುರೂಪವಾಗಿರುವ ವ್ಯವಸಾಯ. ಇದರ ಅಡಿಯಲ್ಲಿ ಮನೆಗಳಲ್ಲಿಯೇ ರೈತರು ಹಲವಾರು ಕಾರ್ಯ ಕೈಗೊಳ್ಳಬಹುದಾಗಿದೆ. ಕೆಲವು ಉದಾಹರಣೆಗಳನ್ನು ನೋಡಬಹುದು.

**ಪುಷ್ಪಕೃಷಿ ಹಾಗು ಜೇನು ಕೃಷಿ :** ಇದಕ್ಕೆ ಬೇರೆ ಜಮೀನು ಬೇಕಿಲ್ಲ. ರೈತರು ತಮ್ಮ ಮನೆಯ ಅಂಗಳದಲ್ಲೇ ಈ ಕೃಷಿಯನ್ನು ನಡೆಸಬಹುದು. ಜೇನಿಗೆ ಈಗ ತುಂಬಾ ಬೇಡಿಕೆ ಇದ್ದು ಔಷಧ ತಯಾರಿಕೆಯಲ್ಲೂ ಬಳಸಲಾಗುತ್ತಿದೆ. ಪುಷ್ಪಕೃಷಿ ಇಂದು ನಮಗೆ ಅಮೂಲ್ಯವಾದ ವಿದೇಶಿ ವಿನಿಮಯವನ್ನು ಕೂಡ ಗಳಿಸಿಕೊಡುತ್ತಿದೆ. ಈ ತರಹದ ಚಟುವಟಿಕೆಗೆ ಬ್ಯಾಂಕುಗಳು ಹೆಚ್ಚು ಹೆಚ್ಚು ಹಣ ನೀಡಿ ಪ್ರೋತ್ಸಾಹಿಸಬೇಕು.

**ಮೀನು ಸಾಕಣೆ:** ತಮ್ಮ ಮನೆಯ ಬಾವಿ, ಊರಿನ ಕೆರೆ, ಹಳ್ಳ ಕೊಳ್ಳಗಳಲ್ಲಿ ರೈತರು ಹೆಚ್ಚಿನ ಶ್ರಮ ಇಲ್ಲದೆ ಮೀನುಗಳನ್ನು ಸಾಕಿ ಬೆಳೆಸಿ ತಮ್ಮ ಹಾಗೂ ದೇಶದ ಆರ್ಥಿಕೋನ್ನತಿ ಮಾಡಬಹುದಾಗಿದೆ. ಇತ್ತೀಚೆಗೆ ಸೀಗಡಿ ಮೀನಿನ ಕೃಷಿ ಬಹಳ ಪ್ರಾಮುಖ್ಯ ಪಡೆದಿದ್ದು ಇದರ ರಫ್ತುಮಾಡಿ ವಿದೇಶಿ ವಿನಿಮಯ ಗಳಿಸಲಾಗುತ್ತಿದೆ. ಬ್ಯಾಂಕುಗಳು ಈ ತರಹದ ಚಟುವಟಿಕೆಗಳಲ್ಲಿ ಹಣ ಹೂಡಿ ಹೆಚ್ಚು ಹೆಚ್ಚು ಜನರು ಈ ಕಾರ್ಯ ಕೈಗೊಳ್ಳುವಂತೆ ಪ್ರೋತ್ಸಾಹಿಸಬೇಕು.

**ಕಾಫಿ, ಟೀ, ರಬ್ಬರ್ ವ್ಯವಸಾಯ :** ಗುಡ್ಡ ಪ್ರದೇಶಗಳಲ್ಲಿ ಮುಖ್ಯವಾಗಿ ಈ ತರಹದ ವ್ಯವಸಾಯ ನಡೆಸಲ್ಪಡುತ್ತದೆ. ಇದು ತುಂಬಾ ಜನರಿಗೆ ಉದ್ಯೋಗ ಒದಗಿಸುವುದಲ್ಲದೆ ತುಂಬಾ ಲಾಭಪ್ರದವಾದ ವ್ಯವಸಾಯ ಕೂಡ ಆಗಿದೆ. ಕಾಫಿ, ಟೀ, ಹಾಗು ರಬ್ಬರ್‌ಗೆ ದೇಶೀಯ ಮಾರುಕಟ್ಟೆ ಅಲ್ಲದೇ ಅಂತರ್‌ರಾಷ್ಟ್ರೀಯ ಮಾರುಕಟ್ಟೆಯಲ್ಲೂ ತುಂಬಾ ಬೇಡಿಕೆ ಇದ್ದು, ಒಂದು ಉತ್ತಮ ವ್ಯವಸಾಯವಾಗಿದೆ. ಬ್ಯಾಂಕುಗಳು ಈ ವ್ಯವಸಾಯಕ್ಕೆ ಉದರಿ ನೀಡುತ್ತಿವೆಯಾದರೂ ಇನ್ನೂ ಹೆಚ್ಚಿನ ಹಣವನ್ನು ಈ ಕ್ಷೇತ್ರದಲ್ಲಿ ಹೂಡಬಹುದಾಗಿದೆ. ಈ ದಿಶೆಯಲ್ಲಿ ಕಾಫಿ ಹಾಗೂ ಟೀ ಮಂಡಳಿಗಳು ಬ್ಯಾಂಕುಗಳಿಗೆ ಪೂರಕವಾಗಿ ಕೆಲಸ ಮಾಡುತ್ತಿವೆ.

**ಗುಡಿ ಕೈಗಾರಿಕೆ :** ರೈತರಿಗೆ ಜಮೀನಿನಲ್ಲಿ ಕೆಲಸ ಇಲ್ಲದ ಸಮಯದಲ್ಲಿ ಅವರಿಗೆ ಹಣ ಗಳಿಸಲು ಸಾಧ್ಯವಾಗುವಂಥ ಗುಡಿ ಕೈಗಾರಿಕೆಗಳಲ್ಲಿ ಅವರನ್ನು ತೊಡಗಿಸಲು ಪ್ರೇರೇಪಣೆ ಅಗತ್ಯ. ಈ ರೀತಿಯ ಕೆಲಸಗಳಿಂದ ರೈತರೂ ವರ್ಷದ ಹನ್ನೆರಡೂ ತಿಂಗಳು ಹಣ ಸಂಪಾದಿಸಬಹುದಾಗಿದೆ. ಇಲ್ಲಿಯೂ ಸಹ ಬ್ಯಾಂಕುಗಳು ಹೆಚ್ಚು ಹೆಚ್ಚು ಹಣ ಹೂಡಬಹುದಾಗಿವೆ.

ಇಂದು ಕೃಷಿಗೆ ನೀಡಿದ ಸಾಲದ ವಸೂಲಾತಿಯ ದರ ತೀರಾ ಕಡಿಮೆ ಇದೆ ಎನ್ನುವ ವಾದವಿದೆ. ಅದಕ್ಕೆ ಕಾರಣ : 1 ಬ್ಯಾಂಕುಗಳು ರೈತರಿಗೆ ನೀಡುತ್ತಿರುವ ಸಾಲದ ಸ್ವರೂಪ. ಇಂದು ರೈತನಿಗೆ ಸಾಲ ಕೇವಲ ಜಮೀನು ಕೃಷಿಯೋಗ್ಯ ಮಾಡುವದರಿಂದ ಹಿಡಿದು ಬೆಳೆ ಬೆಳೆಯುವುದಕ್ಕಷ್ಟೇ ಬೇಕಾಗುವದಿಲ್ಲ. ಇದಲ್ಲದೆ ಬೆಳೆಯನ್ನು ಮಾರಾಟಮಾಡುವುದಕ್ಕೆ ಹಾಗು ಅವನ ವೈಯಕ್ತಿಕ ಅಗತ್ಯಗಳಿಗೂ ಸಾಲಬೇಕಾಗಿದೆ. ಉದಾ: ಮನೆಕಟ್ಟಲು, ಮದುವೆ ಮುಂತಾದವಕ್ಕೆ. ರೈತರ ಈ ಇತರೆ ಆವಶ್ಯಕತೆಗಳತ್ತ ಯಾರೂ ಗಮನ ಕೊಟ್ಟಿಲ್ಲವಾದ್ದರಿಂದ ಬೇರೆ ದಾರಿ ಇಲ್ಲದೆ ರೈತ ತಾನು ಬೆಳೆದ ಉತ್ಪನ್ನಗಳಿಂದ ಬಂದ ಆದಾಯವನ್ನು ಇಲ್ಲಿ ಹೂಡುತ್ತಿದ್ದಾನೆ. ಒಂದು ವೇಳೆ ರೈತರ ಈ ಅಗತ್ಯಗಳನ್ನೂ ಬ್ಯಾಂಕುಗಳು ಪೂರೈಸುವಂತಾದರೆ ವಸೂಲಾತಿಯ ಪ್ರಮಾಣ ಹೆಚ್ಚಾಗುವುದರಲ್ಲಿ ಸಂಶಯವಿಲ್ಲ.

**ಸರಕಾರದ ಸಾಲ ಮನ್ನಾ ಯೋಜನೆಗಳು :** ಇವು ಒಂದು ರೀತಿ ರೈತರನ್ನು ಸೋಮಾರಿಗಳನ್ನಾಗಿಸುತ್ತಿವೆ ಹಾಗೂ ಅವರಲ್ಲಿ ಬೇಜವಾಬ್ದಾರಿತನವನ್ನು ಹುಟ್ಟುಹಾಕುತ್ತಿವೆ. ಈ ಸಾಲ ಮನ್ನಾ ಯೋಜನೆಗಳಿಂದ ಯಾವ ಪುರುಷಾರ್ಥವೂ ಸಾಧಿತವಾಗುವುದಿಲ್ಲ. ಸರಕಾರದ ಸಾಲ ಹೇಗೂ ಮನ್ನಾ ಆಗುತ್ತದೆ, ನಾವೇನೂ ತೀರಿಸುವ ಹಾಗಿಲ್ಲ ಎಂಬ ಭಾವನೆ ರೈತರಲ್ಲಿ ಬೆಳೆದು ಅಂತಹ ಹಣ ಬೇರೆ ಅನುತ್ಪಾದಕ ಚಟುವಟಿಕೆಗಳಲ್ಲಿ ಹರಿದು, ಬ್ಯಾಂಕಿನ ಸಾಲಗಳು ಮರುಪಾವತಿ ಆಗದೆ ಹಾಗೇ ಉಳಿದಿವೆ.

ಒಟ್ಟಾರೆ ಕೃಷಿಯನ್ನು ಒಂದು ಉದ್ದಿಮೆ ಎಂದು ಪರಿಗಣಿಸಿ, ಆದಕ್ಕಿರುವ ಮಹತ್ವವನ್ನು ಗಮನಿಸಿ, ರಾಜಕೀಯ ಹಸ್ತಕ್ಷೇಪದಿಂದ ಮುಕ್ತವಾದ ಸಾಲಗಳನ್ನು ನೀಡಿ, ವೈಜ್ಞಾನಿಕ ರೀತಿಯಲ್ಲಿ ಕೃಷಿ ನಡೆಸಲು ರೈತರನ್ನು ಪ್ರೇರೇಪಿಸಿದರೆ, ಹಾಗೂ ಬ್ಯಾಂಕುಗಳೂ ಇನ್ನೂ ಹೆಚ್ಚು ಹೆಚ್ಚು ಬಂಡವಾಳವನ್ನು ಈ ರಂಗದಲ್ಲಿ ಹೂಡಿದರೆ ಭಾರತದ ಆರ್ಥಿಕ ಉತ್ಪಾದನೆಯಲ್ಲಿ ಕೃಷಿ ಕ್ಷೇತ್ರ ಇನ್ನೂ ಹೆಚ್ಚು ಶಕ್ತಿಯುತವಾಗಿ ನಿಲ್ಲುತ್ತದೆ.

---

## ಚಂದಾದಾರರಲ್ಲಿ

ನಿಮ್ಮ ವಿಳಾಸದಲ್ಲಿ ಬದಲಾವಣೆಯಾದಾಗ ದಯವಿಟ್ಟು ನಿಮ್ಮ ಹೊಸ ವಿಳಾಸವನ್ನು ನಮಗೆ ತಿಳಿಸಿ.

**ಸಮನ್ವಯ ಸಮಿತಿ**

ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳು

೨೨ ಜಯಚಾಮರಾಜೇಂದ್ರ ರಸ್ತೆ

ಬೆಂಗಳೂರು ೫೬೦ ೦೦೨

---

# ವಿಶ್ವ ವ್ಯಾಪಾರ ಸಂಸ್ಥೆ


## ಧನಂಜಯ ಭಂಡಿ

ಭಾರತೀಯ ಸ್ಟೇಟ್ ಬ್ಯಾಂಕ್, ಸಂತ ಮಾರ್ಕ್ ರಸ್ತೆ, ಬೆಂಗಳೂರು–೧


**ಪ್ರಪಂಚದ ವಿವಿಧ ರಾಷ್ಟ್ರಗಳ ನಡುವಣ ವ್ಯಾಪಾರ ಯಾವುದೇ ನಿರ್ಬಂಧಕ್ಕೆ ಒಳಪಡಬಾರದು. ಸುಂಕ, ಪ್ರೋತ್ಸಾಹಧನ, ಆಮದು–ರಫ್ತುಗಳ ನಿಯಂತ್ರಣ ಮುಂತಾದವು ಮುಕ್ತ ವ್ಯಾಪಾರಕ್ಕೆ ಅಡ್ಡಿಗಳು. ಇವನ್ನೆಲ್ಲ ಕ್ರಮಕ್ರಮವಾಗಿ ಇಳಿಸುವ ಬಗ್ಗೆ ರಾಷ್ಟ್ರಗಳ ನಡುವೆ ಹಲವು ಸೂತ್ರಗಳಲ್ಲಿ ಸಂಧಾನ ಮತ್ತು ಒಡಂಬಡಿಕೆಗಳಾಗುತ್ತ ಬಂದಿವೆ. ಈಚಿನ ಸುತ್ತಿನ ಅನಂತರ ಈ ವ್ಯವಸ್ಥೆಯ ಬದಲು 'ವಿಶ್ವ ವ್ಯಾಪಾರ ಸಂಸ್ಥೆ' ಎಂಬ ಶಾಶ್ವತ ಸಂಸ್ಥೆ ಸ್ಥಾಪಿತವಾಗಿದೆ. ಪರ ವಿರೋಧ ವಾದಗಳ ಪರಿಚಯ ಇಲ್ಲಿದೆ.**

ಮಹಾಯುದ್ಧಗಳಿಗಿಂತ ಪೂರ್ವಕಾಲದ ಪರಿಸ್ಥಿತಿಯನ್ನು ಗಮನಿಸಿದರೆ ಕಂಡುಬರುವ ಅಂಶಗಳೆಂದರೆ, ಈ ಎರಡು ಮಹಾಯುದ್ಧಗಳಿಗೆ ಅಂದಿನ ವ್ಯಾಪಾರ ನೀತಿಯೂ ಕಾರಣ ಎನ್ನಬಹುದಾಗಿದೆ. ಅನೇಕ ರಾಷ್ಟ್ರಗಳ ಮಧ್ಯೆ ನಡೆಯುತ್ತಿದ್ದ ತೀವ್ರವಾದ ಸ್ಪರ್ಧೆ ಪರಸ್ಪರರಲ್ಲಿ ವೈಷಮ್ಯವನ್ನು ಮೂಡಿಸಲು ಪ್ರಮುಖ ಕಾರಣ. ತಮ್ಮ ದೇಶದ ಉತ್ಪನ್ನಗಳ ರಫ್ತು ಹೆಚ್ಚಿಸಲು ತೆರಿಗೆ ವಿನಾಯತಿ, ಸಹಾಯಧನಗಳನ್ನು ನೀಡಿ ಪ್ರೋತ್ಸಾಹಿಸುತ್ತಿದ್ದರೆ, ಆಮದನ್ನು ಹತ್ತಿಕ್ಕಲು ದೊಡ್ಡ ದೊಡ್ಡ ಪ್ರಮಾಣದಲ್ಲಿ ಸುಂಕಗಳನ್ನು ಹೇರುತ್ತಿದ್ದರು. ಇದರಿಂದಾಗಿ ವಿಶ್ವ ಮಾರುಕಟ್ಟೆಯು ಅನಿರ್ಬಂಧಿತವಾಗಿ ಸಾಗಲು ತೊಡಕಾಯಿತು.

ವಿಶೇಷೀಕರಣ ಹಾಗೂ ಶ್ರಮ ವಿಭಜನೆಯ ಉಪಯುಕ್ತತೆಯು ಎಲ್ಲರಿಗೂ ದೊರಕುವಂತಾಗಲು, ಸುಂಕ ಮಾರುಕಟ್ಟೆಯ ಕೋಟೆ ಒಡೆದು ಮುಕ್ತಮಾರುಕಟ್ಟೆ ರಚನೆಯಾಗಿ ಎಲ್ಲರೂ ಪ್ರಗತಿ ಸಾಧಿಸುವಂತಾಗಲಿ ಎಂಬ ಆಶಯ ಮೂಡಿತ್ತು. ಮಹಾಯುದ್ಧಗಳ ನಂತರದ ಮಾತುಕತೆಗಳಿಂದ ಹುಟ್ಟಿಕೊಂಡ ಅನೇಕ ಅಂತರರಾಷ್ಟ್ರೀಯ ಸಂಸ್ಥೆಗಳಂತೆಯೇ ಇದೂ ಒಂದು.

ವಿಶ್ವ ವ್ಯಾಪಾರ ಸಂಸ್ಥೆಯು ಜನವರಿ ೧, ೧೯೯೫ರಂದು ಜನ್ಮ ತಾಳಿತು. ಇದರ ಹುಟ್ಟಿಗೆ ಕಾರಣವಾದ ಗ್ಯಾಟ್ ಅಂದರೆ "ಸುಂಕ ಮತ್ತು ವ್ಯಾಪಾರ ಕುರಿತ ಸಾಮಾನ್ಯ ಒಡಂಬಡಿಕೆ" ಹಾಗೂ ಇದೇ ಕಾಲದ "ಅಂತರರಾಷ್ಟ್ರೀಯ ವ್ಯಾಪಾರ ಸಂಸ್ಥೆಗಳ" ಬಗ್ಗೆ ಕೆಲವು ವಿವರಗಳನ್ನು ತಿಳಿಯೋಣ.

ಕ್ಯೂಬಾದ ಹವಾನದಲ್ಲಿ 1947ರ ನವೆಂಬರ್ 21ರಿಂದ 1948ರ ಮಾರ್ಚ್ 24ರ ವರೆಗೆ ವಿಶ್ವಸಂಸ್ಥೆಯು ನಡೆಸಿದ ಸಭೆಯಲ್ಲಿ ಅಂತರರಾಷ್ಟ್ರೀಯ ವ್ಯಾಪಾರ ಸಂಸ್ಥೆಯ ಹುಟ್ಟಿಗೆ ಮಾತುಕತೆ ನಡೆಯಿತು. ಆದರೆ ಅಮೆರಿಕಾದ ಸೆನೆಟ್ ಸಭೆಯೇ ಇದರ ಬಗ್ಗೆ ಅಮೆರಿಕಾಕ್ಕೆ ಒಪ್ಪಿಗೆ ನೀಡದ ಕಾರಣ ಈ ಸಂಸ್ಥೆ ಅಸ್ತಿತ್ವಕ್ಕೆ ಬರಲಿಲ್ಲ. ಆದರೆ ಸುಮಾರು ಇದೇ ಸಮಯದಲ್ಲಿ, ಅಂದರೆ 1947ರಲ್ಲಿ ಕೆಲವು ಬದಲಾವಣೆಗಳೊಡನೆ, ನಡೆದ ಜಿನೀವಾ ಸಭೆಯ ನಿರ್ಣಯದೊಂದಿಗೆ ಜನವರಿ 1, 1948ರಲ್ಲಿ "ಗ್ಯಾಟ್" ಅಸ್ತಿತ್ವ ಪಡೆಯಿತು. ಜಿನೀವಾದಲ್ಲಿ ಪ್ರಧಾನ ಕಛೇರಿ ಹೊಂದಿದ್ದ ಇದು ಕಾಲಕಾಲಕ್ಕೆ ಅನೇಕ ಸಂಧಾರಣೆ ಹಾಗೂ ತಿದ್ದುಪಡಿಗಳಿಗಾಗಿಯೂ, ಮಾತುಕತೆಗಳಿಗಾಗಿಯೂ ಹಲವು ಕಡೆ ಅನೇಕ ಸುತ್ತಿನ ಸಭೆಗಳನ್ನು ನಡಸಿತು.

ಅಂತರರಾಷ್ಟ್ರೀಯ ವ್ಯಾಪಾರದ ಸುಮಾರು ಶೇಕಡಾ 90ರಷ್ಟು ವಹಿವಾಟುಗಳು ಇದರ ಅಡಿಯಲ್ಲೇ ರೂಪುಗೊಳ್ಳುತ್ತಿದ್ದವು. ಗ್ಯಾಟ್‌ನ ಸದಸ್ಯ ರಾಷ್ಟ್ರಗಳು ಅಂತರರಾಷ್ಟ್ರೀಯ ವಹಿವಾಟಿನ ಮಾತುಕತೆಗಳನ್ನೂ, ವ್ಯಾಪಾರ ನಿರ್ಬಂಧಗಳನ್ನೂ, ವ್ಯಾಪಾರೀ ವ್ಯತ್ಯಯ ಹಾಗೂ ವಿವಾದಗಳನ್ನೂ ಬಗೆಹರಿಸಿಕೊಳ್ಳಲು ಇದು ಒಂದು ವೇದಿಕೆಯಾಯಿತು. ಇದು ಕೂಡ ಬಲಿಷ್ಠ ದೇಶವಾದ ಅಮೇರಿಕ ಹಾಗೂ ಪಶ್ಚಿಮ ಯೂರೋಪುಗಳ ಹಿಡಿತದಲ್ಲಿದ್ದವು ಎಂಬ ಆರೋಪ ಸತ್ಯಕ್ಕೆ ದೂರವಲ್ಲ. ಆದರೂ ಅಭಿವೃದ್ಧಿಶೀಲ ದೇಶಗಳೂ ತಮ್ಮ ಅಂತರರಾಷ್ಟ್ರೀಯ ವಹಿವಾಟುಗಳನ್ನು ವೃದ್ಧಿಗೊಳಿಸಲು ಹಾಗೂ ಸರಳ ಮತ್ತು ಬಹುಮುಖಗೊಳಿಸಲು ಇದೊಂದು ಅವಕಾಶದಂತಿತ್ತು. ಈ ಸಂಸ್ಥೆಯ ಜೊತೆಗೇ ಖಂಡಾಂತರಗಳಲ್ಲಿರುವ ಇ.ಇ.ಸಿ., ಜಿ–15 ಹಾಗೂ ಸಾರ್ಕ್ ಮುಂತಾದ ಇತರ ಸಂಸ್ಥೆಗಳ ಅಸ್ತಿತ್ವಕ್ಕೂ ಅವಕಾಶವಿತ್ತು. ಇವು ಈ ಸಂಸ್ಥೆಗೆ ಪೂರಕವಾಗಿರುವಂಥವು.

"ಗ್ಯಾಟ್"ನ ಸದಸ್ಯ ರಾಷ್ಟ್ರಗಳನ್ನು "ಅತಿ ಒಲವಿನ ರಾಷ್ಟ್ರಗಳು (ಮೋಸ್ಟ್ ಫೇವರ್ಡ್ ನೇಷನ್ಸ್) ಎಂದು ಪರಸ್ಪರ ಪರಿಗಣಿಸಬೇಕಾಗಿತ್ತು. "ವಿಶ್ವ ವ್ಯಾಪಾರ ಸಂಸ್ಥೆ ಅಸ್ತಿತ್ವಕ್ಕೆ ಬರುವ ಮುನ್ನವೇ

ಗ್ಯಾಟ್ ಬೇರೆ ಬೇರೆ ಪ್ರದೇಶಗಳಲ್ಲಿ ಈಗಾಗಲೇ ಸಭೆ ಸೇರಿ ಎಂಟು ಸುತ್ತಿನ ಮಾತುಕತೆ ನಡೆಸಿತ್ತು. 1986ರಲ್ಲಿ ಉರುಗ್ವೆ ಸುತ್ತಿನ ಮಾತುಕತೆಯು ಗ್ಯಾಟ್‌ನಲ್ಲಿ ಅನೇಕ ಪ್ರಮುಖ ವಿಷಯಗಳನ್ನು ಸೇರಿಸಿತು. 15ನೇ ಡಿಸೆಂಬರ್ 1993ರಲ್ಲಿ ಮೊರಾಕೋದಲ್ಲಿ ಮುಕ್ತಾಯಗೊಂಡ ಈ ಸಭೆಯ ನಿರ್ಣಯಗಳಿಗೆ 1994ರ ಏಪ್ರಿಲ್‌ನಲ್ಲಿ ಸದಸ್ಯ ರಾಷ್ಟ್ರಗಳು ಸಹಿಮಾಡಿದವು.

ಉರುಗ್ವೆ ಸುತ್ತಿನ ಮಾತುಕತೆಯಲ್ಲಿ ಅಮೇರಿಕವು ವ್ಯಾಪಾರ ಸರಕುಗಳಿಗೆ ಮಾತ್ರವಲ್ಲದೆ, ಸೇವಾಕ್ಷೇತ್ರದಲ್ಲಿ ಇರುವ ನಿರ್ಬಂಧಗಳನ್ನೂ ತೊಡೆದುಹಾಕಲು ಒತ್ತಾಯಿಸಿತು. ಹಾಗಾಗಿ ಸಾಂಪ್ರದಾಯಿಕ ವಿಷಯಗಳಾದ ವ್ಯಾಪಾರದ ನಿರ್ಬಂಧ ಸಡಲೀಕರಣಗಳಲ್ಲದೆ, ಇನ್ನೂ ಅನೇಕ ಸುಂಕೇತರ ವ್ಯಾಪಾರ ಸಂಬಂಧಿತ ಬೌದ್ಧಿಕ ಆಸ್ತಿಯ ಹಕ್ಕು ವಿಷಯಗಳನ್ನು ಪ್ರಸ್ತಾವಿಸಲಾಯಿತು. ಬೌದ್ಧಿಕ ಆಸ್ತಿಗಳ ಸ್ವಾಮ್ಯದ ರಕ್ಷಣಾ ಹಕ್ಕು ವ್ಯಾಪಾರ ಸಂಬಂಧಿತ ಬೌದ್ಧಿಕ ಆಸ್ತಿ ಹಕ್ಕು ವಿನಿಯೋಜನಾ, ಹಕ್ಕು ಹಾಗೂ ಸೇವಾ ಕ್ಷೇತ್ರಗಳಲ್ಲಿನ ವ್ಯಾಪಾರಗಳೂ ಪ್ರಮುಖವಾದವು.

ಸುಂಕಗಳಲ್ಲಿ ಶೇಕಡಾ 33ರಿಂದ 40ರಷ್ಟು ಕಡಿತವನ್ನು ಸಾಧಿಸಿದ್ದರೂ ಸುಂಕೇತರ ವ್ಯಾಪಾರ ನಿಬಂಧನೆಗಳೂ ಪ್ರಮುಖವಾದವು. ಅಗ್ಗವಾಗಿ ಪದಾರ್ಥಗಳನ್ನು ಹೇರದಂತೆ (ಆ್ಯಂಟೀ ಡಂಪಿಂಗ್) ಕ್ರಮಗಳ ಬಗ್ಗೆ ನಿರ್ಬಂಧಿಸಿದುದರ ಜೊತೆಗೆ, ಅಂದಿನ ಒಡಂಬಡಿಕೆಯು ರಫ್ತನ್ನು ಉತ್ತೇಜಿಸುವ ಬಗ್ಗೆ ರಫ್ತಿನ ಮೇಲಣ ಅಪ್ರತ್ಯಕ್ಷ ತೆರಿಗೆಯ ವಾಪಸಾತಿಗೆ ಅವಕಾಶ ನೀಡುತ್ತಿದೆಯಾದರೂ ರಫ್ತಿಗೆ ಸಹಾಯಧನವನ್ನು ನೀಡುವುದನ್ನು ಕಡಿಮೆಗೊಳಿಸಲು ಹೇಳುತ್ತದೆ. ಆಮದಿನ ಮೇಲೆ ಪ್ರತಿರೋಧಕವಾಗುವ ರೀತಿಯಲ್ಲಿ ಸುಂಕ ಹೇರುವುದನ್ನು ಪ್ರತಿಬಂಧಿಸಿದರೂ, ಸ್ವದೇಶಿ ಕೈಗಾರಿಕೆಗಳ ಮೇಲೆ ಉಂಟಾಗಬಹುದಾದ ತೊಂದರೆಗಳನ್ನು ತಡೆಗಟ್ಟಲು ಅವಶ್ಯವಾಗುವಷ್ಟರಮಟ್ಟಿಗೆ ಸುಂಕ ಹೇರಲು ಅವಕಾಶವಿತ್ತು. ಆವರೆಗೂ ಅಭಿವೃದ್ಧಿ ಹೊಂದಿದ ಹಾಗೂ ಅಭಿವೃದ್ಧಿಶೀಲ ದೇಶಗಳೆರಡರಲ್ಲೂ ರಕ್ಷಿತ ಕ್ಷೇತ್ರವೆಂದು ಪರಿಗಣಿಸಲ್ಪಟ್ಟಿದ್ದ ಕೃಷಿ ವ್ಯಾಪಾರಕ್ಕೆ ಸಂಬಂಧಿಸಿದಂತೆ, ಬಹು ಮುಖ್ಯ ನಿರ್ಣಯ ಕೈಗೊಳ್ಳಲಾಯಿತು. ಸದಸ್ಯ ರಾಷ್ಟ್ರಗಳು ಮಾರುಕಟ್ಟೆಯನ್ನು ಸ್ಥಾಪಿಸಲು, ಸುಂಕಪಟ್ಟಿಯಲ್ಲಿ ವಿನಾಯತಿ ತೋರಿಸಲಾಯಿತು. ಆದರೂ ಅಭಿವೃದ್ಧಿಶೀಲ ದೇಶಗಳಿಗಾಗಿ ಈ ಒಡಂಬಡಿಕೆಯಲ್ಲಿ ಕೆಲವು ವಿನಾಯತಿ ನೀಡಲಾಯಿತು. ಅಂತೆಯೇ ಇನ್ನೊಂದು ಪ್ರಮುಖ ನಿರ್ಣಯವೆಂದರೆ, ವಿವಿಧ ತಂತುಗಳ ಜವಳಿ ಒಪ್ಪಂದ (ಮಲ್ಟಿ ಫೈಬರ್ ಅಗ್ರಿಮೆಂಟ್). ಕೈಗಾರಿಕಾ ದೇಶ ಮತ್ತು ಅಭಿವೃದ್ಧಿಶೀಲ ದೇಶಗಳ ಮಧ್ಯೆ ಇವುಗಳಲ್ಲಿ ಅನೇಕ ಕಟ್ಟುಪಾಡುಗಳಿದ್ದವು. ಅತಿಯೋಗ್ಯ ರಾಷ್ಟ್ರಗಳಿಗೆ ಸೇವಾಕ್ಷೇತ್ರದ ವ್ಯಾಪಾರಕ್ಕೆ ಅನುವು ಮಾಡಿಕೊಡುವುದಲ್ಲದೆ, ಇವುಗಳ ವಿನಿಯಮವು ಪಾರದರ್ಶಕವಾಗಿರಬೇಕೆಂದೂ ನಿರ್ಧರಿಸಲಾಯಿತು.

ಟ್ರಿಪ್ಸ್‌ನಲ್ಲಿ ಗ್ರಂಥಸ್ವಾಮ್ಯ, ವ್ಯಾಪಾರ ಚಿಹ್ನೆ, ತಯಾರಿಕಾ ಹಕ್ಕು, ಕೈಗಾರಿಕಾ ವಿನ್ಯಾಸ ಇವುಗಳಿಗೆ ರಕ್ಷಣೆ ನೀಡಬೇಕೆಂದೂ, ಸದಸ್ಯ ರಾಷ್ಟ್ರಗಳ ಮಧ್ಯೆ ತಲೆದೋರಬಹುದಾದ ವ್ಯತ್ಯಯ ಹಾಗೂ ವಿವಾದಗಳನ್ನು ಬಗೆಹರಿಸಲು ಪ್ರಕ್ರಿಯೆಗಳಲ್ಲಿ ಸುಧಾರಣೆಯಾಗಬೇಕೆಂದೂ ನಿರ್ಧರಿಸಲಾಯಿತು.

ಇವೆಲ್ಲವುಗಳಿಗಿಂತ ದೊಡ್ಡ ಸಾಧನೆಯಾಗಿ, ವಿಶ್ವವ್ಯಾಪಾರ ಸಂಸ್ಥೆಯನ್ನು ಹುಟ್ಟುಹಾಕಲಾಯಿತು. ಇದರಿಂದಾಗಿ, ಗ್ಯಾಟ್‌ನ ಬದಲಿಯಾಗಿ ವಿಶ್ವವ್ಯಾಪಾರ ಸಂಸ್ಥೆ ಅಸ್ತಿತ್ವ ಪಡೆಯಿತು. ಆದರೂ ಕೆಲವು ರಾಷ್ಟ್ರಗಳು 1995ರ ವರೆಗೆ ಮಾಡಿಕೊಂಡ ಒಪ್ಪಂದಗಳ ಜಾರಿಗಾಗಿ ಹಾಗೂ ಅನುಷ್ಠಾನಗಳು ಪೂರ್ತಿಗೊಳ್ಳಲು ವಿಶ್ವವ್ಯಾಪಾರ ಸಂಸ್ಥೆಯ ಜೊತೆಗೇ ಗ್ಯಾಟ್‌ನ ಸಹ ಅಸ್ತಿತ್ವಕ್ಕೂ ಒಂದು ವರ್ಷದ ಅವಕಾಶ ನೀಡಲಾಗಿತ್ತು.

ಗ್ಯಾಟ್‌ಗಿಂತಲೂ ವಿಸ್ತೃತ ವ್ಯಾಪ್ತಿಯನ್ನೊಳಗೊಂಡ ವಿಶ್ವ ವ್ಯಾಪಾರ ಸಂಸ್ಥೆಯು ಈಗಾಗಲೇ 125 ರಾಷ್ಟ್ರಗಳನ್ನು ಸದಸ್ಯರನ್ನಾಗಿ ಒಳಗೊಂಡಿದೆ. ಬ್ರೆಜಿಲ್ ದೇಶದ ಬೆಕ್ಸಿಲ್‌ನಲ್ಲಿ ಪ್ರಧಾನ ಕಛೇರಿ ಹೊಂದಿರುವ ಇದರ ಈಗಿನ ಅಧ್ಯಕ್ಷರು ರಿನೆಟೊ ರಿಗೇರಿಯಾ. ಸಂಸ್ಥೆಯು ತೆರಿಗೆ ಹಾಗೂ ವ್ಯಾಪಾರೀ ಸುಂಕಗಳಲ್ಲಿ ಏಕರೂಪತೆ ರೂಪಿಸಿದೆ. ಸದಸ್ಯ ರಾಷ್ಟ್ರಗಳ ಮಧ್ಯೆ ನಡೆಯಬಹುದಾದ ಎಲ್ಲ ಅಂತರರಾಷ್ಟ್ರೀಯ ವ್ಯಾಪಾರಕ್ಕೆ ಏಕರೂಪಿ ಕಾನೂನನ್ನು ಹೊಂದಿ, ಯಾವುದೇ ಸದಸ್ಯ ರಾಷ್ಟ್ರವು ಇನ್ನೊಂದು ಸದಸ್ಯ ರಾಷ್ಟ್ರದೊಡನೆ ವಹಿವಾಟು ನಡೆಸಲು ನಿರ್ಬಂಧವಿಲ್ಲ. ಪ್ರತ್ಯೇಕವಾದ ಮಾತುಕತೆ ನಡೆಸಬೇಕಾಗಿಲ್ಲ. ಗ್ಯಾಟ್‌ನಲ್ಲಿ ನಿರ್ಣಯಿಸಲ್ಪಟ್ಟ ಎಲ್ಲ ಅಂಶಗಳೂ ಎಲ್ಲ ವ್ಯಾಪಾರಕ್ಕೂ ಅನ್ವಯವಾಗುತ್ತವೆ. ಸದಸ್ಯ ರಾಷ್ಟ್ರಗಳು ತಮ್ಮ ವಿವಾದಗಳನ್ನು ಇದರ ಆಶ್ರಯದಲ್ಲೇ ಬಗೆಹರಿಸಿಕೊಳ್ಳಬಹುದಾದರೂ, ಸಿಂಗಾಪೂರ ಹಾಗೂ ಮಲೇಶಿಯಾ ಮಧ್ಯೆ ನಡೆದ ಪೆಟ್ರೋ-ಕೆಮಿಕಲ್ಸ್‌ನ ವಿವಾದ ಮತ್ತು ಜಪಾನ್ ಹಾಗೂ ಅಮೇರಿಕಾಗಳ ಮಧ್ಯೆ ನಡೆದ ಕಾರು ರಫ್ತಿನ ವಿವಾದಗಳನ್ನು ಅವು ವಿ.ವ್ಯಾ.ಸಂ.ಯಿಂದ ಹೊರಗಡೆಯೇ ಬಗೆಹರಿಸಿಕೊಂಡವು.

### ವಿವಾದಗಳ ಇತ್ಯರ್ಥದ ತಂತ್ರಗಳು

ಉರುಗ್ವೆ ಸುತ್ತಿನ ಮಾತುಕತೆಯ ಒಂದು ಪ್ರಮುಖ ಸುಧಾರಣೆಯೆಂದರೆ, ವಿವಾದಗಳನ್ನು ಬಗೆಹರಿಸಲು ಸೂತ್ರವನ್ನು ರಚಿಸಿದ್ದು.

ಈ ಹೊಸ ಸೂತ್ರದಂತೆ, ಯಾವ ಒಂದು ಸದಸ್ಯ ರಾಷ್ಟ್ರಕ್ಕೆ ಇನ್ನೊಂದು ರಾಷ್ಟ್ರವು ತನ್ನ ಜೊತೆ ವಿ.ವ್ಯಾ.ಸಂ. ಆದರ್ಶಕ್ಕೆ ಆದರ ನೀಡಿ ವ್ಯಾಪಾರ ನಡೆಸುತ್ತಿಲ್ಲ ಎಂದೆನಿಸುವುದೋ, ಅದನ್ನು ಮೊದಲು ದ್ವಿಪಕ್ಷೀಯ ಮಾತುಕತೆಗೆ ಆಹ್ವಾನಿಸಬೇಕು. ಹೀಗೆ ಆರೋಪಿಸಿದ ರಾಷ್ಟ್ರ ಇದೇ ಸಮಯದಲ್ಲಿ ವಿ.ವ್ಯಾ.ಸಂ.ಗೆ ತನ್ನ ದೂರನ್ನು ಲಿಖಿತದಲ್ಲಿ ನೀಡಿ, ವಿಷಯವನ್ನು ವಿ.ವ್ಯಾ.ಸಂ.ಯ ಗಮನಕ್ಕೂ ತರಬೇಕು. ಹೀಗೆ ಆರೋಪಿಸಲ್ಪಟ್ಟ ದೇಶವು

ಆರೋಪಿಸಿದ ದೇಶಕ್ಕೆ, ಅದು ವಿನಂತಿಸಿದ 10 ದಿನಗಳೊಳಗಾಗಿ ತನ್ನ ಉತ್ತರ ತಿಳಿಸಬೇಕು.

ಮುಂದಿನ 20 ದಿನಗಳಲ್ಲಿ ಈ ಎರಡೂ ಸದಸ್ಯ ರಾಷ್ಟ್ರಗಳು ಮಾತುಕತೆ ಆರಂಭಿಸಬೇಕು. ಒಂದು ವೇಳೆ ಈ ಮಾತುಕತೆಗಳು ವಿಫಲವಾದರೆ, 60 ದಿನಗಳೊಳಗಾಗಿ ವಿವಾಹ ಬಗೆಹರಿಸಲು ತನ್ನಿಂದ ತಾನಾಗಿಯೇ ನ್ಯಾಯ ಪಂಚಾಯಿತಿ ಸ್ಥಾಪಿತವಾಗುವುದು. ವಿವಾದವನ್ನು 3ರಿಂದ 18 ತಿಂಗಳೊಳಗೆ ಬಗೆಹರಿಸಲಾಗುವುದು. ತೀರ್ಮಾನದ ಜಾರಿಗಿಂತ ಮೊದಲಿನ ಯಾವುದೇ ನಷ್ಟಕ್ಕೆ ವಿ.ವ್ಯಾ.ಸಂ. ಹೊಣೆಯಲ್ಲ.

ಕೆಲವು ಕಾಲ ಗ್ಯಾಟ್‌ನಲ್ಲಿ ಸದಸ್ಯತ್ವ ಹೊಂದಿದ್ದ ಚೀನಾ ದೇಶವು ಇನ್ನೂ ವಿ.ವ್ಯಾ.ಸಂ.ಯ ಸದಸ್ಯತ್ವ ಪಡೆದಿಲ್ಲ. ಹಾಗೂ ಅದು ವಿಶ್ವ ವ್ಯಾಪಾರ ಸಂಘಟನೆಯನ್ನು ಸೇರುವುದನ್ನು ಅಮೆರಿಕಾ ವಿರೋಧಿಸುತ್ತಿದೆ. ಹಾಗಾಗಿ ಅದು ಸಂಸ್ಥೆಯನ್ನು ಸೇರುವ ಸಂಭವ ಸದ್ಯಕ್ಕಿಲ್ಲ. ಆದರೂ ಅದು ವಿ.ವ್ಯಾ.ಸಂ. ಸೇರಲು ಭಾರತದ ಬೆಂಬಲ ಯಾಚಿಸಿದೆ.

ಬಹುಮುಖಿ ವ್ಯಾಪಾರ ಪದ್ಧತಿಯು ಪರಿಣಾಮಾತ್ಮಕವಾಗಿ ಕಾರ್ಯಗತವಾಗಲು ವಿ.ವ್ಯಾ.ಸಂ. ಅಧಿಕಾರ ಚಲಾಯಿಸಬೇಕು. ಹೀಗಾದಲ್ಲಿ ಮಾತ್ರ ಇದರ ಉದ್ದೇಶ ಸಫಲವಾಗಬಹುದು. ಆದರೂ ಇದು ಸದಸ್ಯ ರಾಷ್ಟ್ರಗಳ ವಿವಾದವನ್ನು ಹೇಗೆ ಮತ್ತು ಎಷ್ಟರಮಟ್ಟಿಗೆ ಪರಿಣಾಮಕಾರಿಯಾಗಿ ಬಗೆಹರಿಸಬಲ್ಲದು ಎಂಬುದರ ಮೇಲೆ ಇದರ ಸಫಲತೆ ನಿಂತಿದೆ. ಅಮೆರಿಕಾ ಸಹಿತವಾಗಿ ಎಲ್ಲ ಸದಸ್ಯ ರಾಷ್ಟ್ರಗಳೂ ನಿರ್ದಾಕ್ಷಿಣ್ಯ ಹಾಗೂ ನಿಷ್ಪಕ್ಷಪಾತವಾಗಿ ಸಂಸ್ಥೆಯಲ್ಲಿ ವ್ಯವಹರಿಸಬೇಕಾಗಿದೆ. ಅನೇಕ ಪಶ್ಚಿಮ ಐರೋಪ್ಯದೇಶಗಳು ಸದಾ ತಮ್ಮ ಸ್ವಾರ್ಥಕ್ಕಾಗಿ ಇನ್ನೊಂದು ದೇಶವನ್ನು ಬೆಂಬಲಿಸುವುದರ ಬದಲು ವಸ್ತುನಿಷ್ಠವಾಗಿ ಇದರಲ್ಲಿ ವ್ಯವಹರಿಸಬೇಕಾಗಿದೆ.

ಒಂದು ರಾಷ್ಟ್ರ ವಿ.ವ್ಯಾ.ಸಂ.ಯಿಂದ ಹೊರಬರಲು ಇಚ್ಛಿಪಟ್ಟಲ್ಲಿ ಅದು 12 ತಿಂಗಳಿನ ಮೊದಲು ತಿಳಿವಳಿಕೆ ಪತ್ರ ನೀಡಬೇಕು. ಅತಿ ಬಲವಿನ ರಾಷ್ಟ್ರಗಳೆಂದು ಸದಸ್ಯ ರಾಷ್ಟ್ರಗಳನ್ನು ಪರಸ್ಪರ ಪರಿಗಣಿಸಬೇಕಾದರೂ, ಒಂದು ದೇಶಕ್ಕೆ ಇನ್ನೊಂದು ದೇಶದಿಂದ ಬೆದರಿಕೆ ಬಂದಲ್ಲಿ, ರಕ್ಷಣೆಯ ಕಾರಣ ನೀಡಿ, ಅತಿ ಬಲವಿನ ರಾಷ್ಟ್ರವೆಂಬ ಪರಿಗಣನೆಯನ್ನು ನೀಡಬೇಕಿಲ್ಲ. ಅಂತೆಯೇ ಇವುಗಳನ್ನು ಇನ್ನೊಂದು ರಾಷ್ಟ್ರ ದುರುಪಯೋಗಪಡಿಸಿಕೊಳ್ಳುತ್ತಿದ್ದರೂ ಈ ಪರಿಗಣನೆಯನ್ನು ರದ್ದುಗೊಳಿಸಬಹುದು. ಆದರೆ ನಿಷ್ಕಾರಣವಾಗಿ ನಿರಾಕರಿಸುವಂತಿಲ್ಲ. ಅಮೆರಿಕವು ತನ್ನ ವಿಧಿ 301ನ್ನು ಇತರ ರಾಷ್ಟ್ರಗಳ ಮೇಲೆ ಹೇರುವಂತಿಲ್ಲ. ಹೀಗಿದ್ದರೂ ಅಮೇರಿಕವು ಇತ್ತೀಚೆಗೆ ಭಾರತದ ಕೆಲವು ಉತ್ಪನ್ನಗಳ ಆಮದಿಗೆ ಕೆಲವು ಸಬೂಬು ನೀಡಿ ತೊಂದರೆಯನ್ನುಂಟುಮಾಡುವುದನ್ನು ಕಾಣಬಹುದು. ಭಾರತದ ನಾರು, ಸಿಂಥೆಟಿಕ್ ಬಟ್ಟೆಗಳು ಬೆಂಕಿಗೆ ಪಕ್ಕಾಗುವುವೆಂದೋ, ಭಾರತ ಅಗ್ಗದ ದರದಲ್ಲಿ ಕೂಲಿ ನೀಡುತ್ತಿದೆಯೆಂತಲೋ, ಬಾಲ ಕಾರ್ಮಿಕರನ್ನು ದುಡಿಸಿಕೊಳ್ಳುತ್ತಿದೆ ಎಂಬ ನೆಪ ನೀಡಿಯೋ ಅದು ಭಾರತದ ವ್ಯಾಪಾರಕ್ಕೆ ತೊಂದರೆ ನೀಡಲು ಹವಣಿಸುತ್ತಿದೆ. ಹೀಗಾಗಿ ಇಂದು ಮುಕ್ತ ವ್ಯಾಪಾರವೆಂಬ ಆದರ್ಶದ ಹೆಸರಿನಲ್ಲಿ ಬಲಿಷ್ಠ ರಾಷ್ಟ್ರಗಳು ಹೇರಿಕೆ ನಡೆಸುತ್ತಿವೆ ಎಂದರೆ ತಪ್ಪಲ್ಲ. ದೇಶದ ಆಂತರಿಕ ಅಥವಾ ಬಾಹ್ಯ ಒತ್ತಡಗಳೂ ಇಲ್ಲಿ ಪ್ರಭಾವ ಬೀರುತ್ತಿವೆ.

### ಭಾರತ ಹಾಗೂ ವಿಶ್ವವ್ಯಾಪಾರ ಸಂಸ್ಥೆ

ಪ್ರಬಲವಾದ ವಿರೋಧದ ಮಧ್ಯೆ ಭಾರತ ಸರ್ಕಾರ ಸುಗ್ರೀವಾಜ್ಞೆಯ ನೆರವಿನಿಂದ ಗ್ಯಾಟ್ ಒಡಂಬಡಿಕೆಗೆ ಸಹಿ ಮಾಡುವ ಕಾರ್ಯವನ್ನು ಸುಗಮಗೊಳಿಸಿಕೊಂಡಿತು. ಭಾರತ ಆದಾಗಲೇ ಗ್ಯಾಟ್‌ನ ಸದಸ್ಯ ದೇಶವಾಗಿರುವುದರಿಂದ ಇದು ವಿ.ವ್ಯಾ.ಸಂ.ಯ ಓರ್ವ ಸಂಸ್ಥಾಪಕ ಸದಸ್ಯ ದೇಶವೆಂದರೆ ತಪ್ಪಲ್ಲ, ಆದರೂ ಟ್ರಿಪ್ಸನ್ನು ಮೊದಲು ಇದು ಸಂಪೂರ್ಣವಾಗಿ ಒಪ್ಪಿರಲಿಲ್ಲ. "ತಯಾರಿಕೆಯ" ಹಕ್ಕಿನ ಸ್ವಾಮ್ಯದ ಬಗ್ಗೆ ನಿಖರವಾದ ವಿವರಣೆ ಇರದಿದ್ದ ಕಾರಣಕ್ಕೆ ಟ್ರಿಪ್ಸನ್ನು ಭಾರತ ಸಂಪೂರ್ಣವಾಗಿ ಒಪ್ಪಿರಲಿಲ್ಲ. ಈಚೆಗೆ ಇದರಲ್ಲೂ ಕೆಲವು ಬದಲಾವಣೆ ಮಾಡಲಾಗಿದೆ. ಟ್ರಿಪ್ಸ್‌ನಲ್ಲಿ ತಿದ್ದುಪಡಿಯಾದ ನಂತರ ಭಾರತವು ಇದನ್ನು ಈಗ ಪೂರ್ಣವಾಗಿ ಒಪ್ಪಿದೆ.

ಟ್ರಿಪ್ಸ್‌ನಲ್ಲಿಯ ಉತ್ಪನ್ನದ (ಪ್ರಾಡಕ್ಟ್ಸ್) ಮೇಲಿನ ಸ್ವಾಮ್ಯ ಸಾಧುವಲ್ಲವೆಂದೇ ವಾದವಿದೆ. ಈ ವರೆಗೆ ಭಾರತದಲ್ಲಿ ಯಾವುದೇ ವ್ಯಕ್ತಿಗೆ ಹೊಸದಾಗಿ ತಯಾರಿಸಿದ ಉತ್ಪನ್ನಗಳ ಮೇಲೆ, ಆದರ ತಯಾರಿಕಾ ಸೂತ್ರಗಳ ಮೇಲೆ ಮಾತ್ರ ಹಕ್ಕು ಪಡೆಯಲು ಅವಕಾಶವಿದೆ. ಆದರೆ ಅದೇ ಉತ್ಪನ್ನವನ್ನು ಬೇರೆ ರೀತಿಯ ಸೂತ್ರ ವಿಧಾನಗಳಿಂದ ಬೇರೆಯವರು ತಯಾರಿಸಲು ನಿರ್ಬಂಧ ವಿಲ್ಲ. ಆದರೆ ಉರುಗ್ವೆ ಸುತ್ತಿನ ಮಾತುಕತೆಯಲ್ಲಿ ಟ್ರಿಪ್ಸ್‌ನಲ್ಲಿ ತಿಳಿಸಿದಂತೆ ವ್ಯಕ್ತಿಯು ಉತ್ಪನ್ನ ಹಾಗೂ ವಿಧಾನಗಳೆರಡರ ಮೇಲೂ ಸ್ವಾಮ್ಯವನ್ನು ಸಾಧಿಸಬಹುದಾಗಿದೆ. ಆದರೆ ಇದು ಭಾರತದ ವಿಜ್ಞಾನಿಗಳ ಸಂಶೋಧನೆ ಹಾಗೂ ಅಭಿವೃದ್ಧಿ ಕಾರ್ಯಗಳಿಗೆ ತೊಡಕಾಗಬಹುದಾಗಿದೆ.

1972ರ ಭಾರತದ ತಯಾರಿಕಾ ಸೂತ್ರದ ಹಕ್ಕು ಇನ್ನು ಹತ್ತು ವರ್ಷಗಳವರೆಗೆ ಊರ್ಜಿತವಾಗಿರುವುದು.

ಡಂಕೆಲ್ ಪ್ರಸ್ತಾವನೆಯಲ್ಲಿರುವ ಷರತ್ತುಗಳಿಗೆ ವಿರೋಧ ಪಕ್ಷಗಳೂ ಅನೇಕ ಅರ್ಥಶಾಸ್ತ್ರಜ್ಞರೂ ಸಾಮಾಜಿಕ ಸಂಸ್ಥೆಗಳೂ ಸಾರ್ವಜನಿಕರೂ ಪ್ರಬಲ ವಿರೋಧವನ್ನು ವ್ಯಕ್ತಪಡಿಸಿದ್ದಾರೆ. ಇದು ಭಾರತದ ರೈತನ ಸ್ವಾತಂತ್ರ್ಯಹರಣವೆಂದೇ ಪ್ರತಿಪಾದಿಸಲಾಗುತ್ತಿದೆ.

ಇತರ ವಿರೋಧಗಳು ಇಂತಿವೆ : ಭಾರತೀಯ ರೈತರು ತಮ್ಮ ಕೃಷಿ ಬೀಜಗಳನ್ನು ತಾವೇ ಪುನಃ ಬಳಸುವಂತಿಲ್ಲ. ವ್ಯಕ್ತಿಯೊಬ್ಬ ಒಂದು ಉತ್ಪನ್ನದ ಮೇಲೆ ಸ್ವಾಮ್ಯವನ್ನು ಪಡೆದರೆ ನಮ್ಮ ರೈತರು ಅದನ್ನು ಬೆಳೆಯುವಂತಿಲ್ಲ. ಜೀವ ರಕ್ಷಕ ಔಷಧಗಳು ವಿದೇಶಗಳಿಂದಲೇ ಆಮದಾಗುವ ಪ್ರಸಂಗ ಬಂದು ಅವುಗಳ

ಬೆಲೆಗಳು ಏರುತ್ತವೆ. ನಮ್ಮ ಉದ್ದಿಮೆದಾರರೂ ವ್ಯಾಪಾರಿಗಳೂ ದುರ್ಬಲರಾಗುತ್ತಾರೆ. ದೇಶೀಯ ಕೈಗಾರಿಕಾ ಉತ್ಪನ್ನಗಳೂ ಗುಡಿ ಕೈಗಾರಿಕಾ ಉತ್ಪನ್ನಗಳೂ ಮೂಲೆಗುಂಪಾಗುತ್ತವೆ. ವಿನಿಯೋಜನೆಯಲ್ಲಿನ ಸಡಿಲಿಕೆಯಿಂದಾಗಿ ವಿದೇಶೀಯರು ನಮ್ಮ ಸಂಪನ್ಮೂಲಗಳನ್ನು ಸೂರೆ ಮಾಡುತ್ತಾರೆ. ದೇಶವು ವಿದೇಶೀಯರ ಕೈವಶವಾಗಿ, ಸ್ವದೇಶೀಯರು ಕೇವಲ ಅವರ ದಾಸರಾಗುತ್ತಾರೆ. ದೇಶ ಮತ್ತಷ್ಟು ಸಾಲದಲ್ಲಿ ಮುಳುಗುತ್ತದೆ.

ಆದರೆ ಭಾರತದ ಗ್ಯಾಟ್ ಅಥವಾ ವಿ. ವ್ಯಾ. ಸಂ. ಯ ಸದಸ್ಯತ್ವವನ್ನು ಸಮರ್ಥಿಸಿದ ಆಡಳಿತ ಪಕ್ಷದ ಹಾಗೂ ಅದರ ಬೆಂಬಲಿಗರ ವಾದ ಈ ರೀತಿ ಇದೆ : ರೈತರು ತಮ್ಮ ಸ್ವಂತ ಕೃಷಿಯ ಬೀಜಗಳನ್ನು ಬಿತ್ತನೆಗೆ ಉಪಯೋಗಿಸಬಹುದು. ಆದರೆ ಸ್ವಾಮ್ಯದ ಹಕ್ಕು ಪಡೆದ ಬೀಜಗಳನ್ನು ಮಾತ್ರ ಒಮ್ಮೆ ಖರೀದಿಸಿ ಇತರರಿಗೆ ಮಾರುವಂತಿಲ್ಲ. ಉರುಗ್ವೆ ಸುತ್ತಿನ ಮಾತುಕತೆಯಲ್ಲಿ ರೈತರು ಕೃಷಿಬೀಜದ ಪುನರ್ಬಳಕೆ ಮಾಡಬಹುದೆಂದಿದೆ. ಬೀಜಗಳ ಖರೀದಿಯನ್ನು ವಿದೇಶೀ ಕಂಪನಿಗಳಲ್ಲೇ ಮಾಡಬೇಕೆಂಬ ಕಡ್ಡಾಯವಿಲ್ಲ. ಅದನ್ನು ರಾಷ್ಟ್ರೀಯ ಕೃಷಿ ಸಂಸ್ಥೆಗಳಿಂದಲೂ ಖರೀದಿಸಬಹುದು. ಅಲ್ಲದೆ, ನಮ್ಮ ದೇಶದ ವಿಜ್ಞಾನಿಗಳೂ ತಮ್ಮ ಸಂಶೋಧನೆಗಳನ್ನು ಇತರರು ದುರುಪಯೋಗಿಸಿಕೊಳ್ಳದಂತೆ ಹಕ್ಕು ಚಲಾಯಿಸಬಹುದು. ನಮ್ಮಲ್ಲಿ ಇಂದು ಗಣಕ, ವಿದ್ಯುನ್ಮಾನಗಳು, ಇನ್ನೂ ಅನೇಕ ಹೊಸ ಹೊಸ ಉತ್ಸಾಹೀ ಸಂಶೋಧಕರ ಸಂಶೋಧನೆಗಳಿಗೆ ಹೊರಗಿನ ಜನರಿಂದ ಸ್ವಾಮ್ಯದ ರಕ್ಷಣೆ ನೀಡಬೇಕಾಗಿದೆ. ಹಾಗಾಗಿ ಈ ಎಲ್ಲ ಉಪಯೋಗವನ್ನು ಪಡೆಯಲು ವಿ. ವ್ಯಾ. ಸಂ.ಗೆ ಸೇರಲೇಬೇಕು. ಸಂಘಟನೆಯ ಹೊರಗುಳಿದು ಎಲ್ಲ ಉಪಯೋಗಗಳಿಂದ ವಂಚಿತರಾಗುವ ಬದಲು, ಕೆಲವು ನಿಬಂಧನೆಗಳಿಗೆ ಒಳಪಟ್ಟು ಹೆಚ್ಚಿನ ಉಪಯೋಗ ಪಡೆಯಲಾದೀತು.

ಬ್ರಹ್ಮಾನಂದರಂತಹ ಅರ್ಥಶಾಸ್ತ್ರಜ್ಞರ ಹೇಳಿಕೆಯಂತೆ, "ಕೊರಿಯಾ, ಜಪಾನ್ ಹಾಗೂ ವಿಶ್ವದ ಅನೇಕ ರಾಷ್ಟ್ರಗಳು ತಾವು ಗ್ಯಾಟ್‌ಗೆ ಸಹಿಮಾಡುವ ಮೊದಲೇ, ವಿಶ್ವಮಾರುಕಟ್ಟೆ ಎದುರಿಸಿ ಅದರಿಂದ ಸಾಕಷ್ಟು ಪ್ರಯೋಜನ ಪಡೆಯಲು ತಯಾರಿ ನಡೆದ ಮೇಲೆಯೇ, ಗ್ಯಾಟ್ ಸೇರಿದವು. ಆದರೆ ಭಾರತ ಅವಸರದ ಕ್ರಮ ಕೈಗೊಂಡಿತು. ಇನ್ನೂ ಸಂಪೂರ್ಣವಾಗಿ ತಯಾರಾಗದಿದ್ದ ನಮ್ಮ ಜನರನ್ನು ಒಮ್ಮೆಗೇ ಅಖಾಡಕ್ಕೆ ನೂಕಿದಂತಾಗಿದೆ."

ಏನಿದ್ದರೂ ಈಗಾಗಲೇ ಅಖಾಡಕ್ಕೆ ಧುಮುಕಿಯಾಗಿದೆ. ನಮ್ಮ ಮುಂದಿನ ಗುರಿಯೆಂದರೆ ವಿಶ್ವ ವ್ಯಾಪಾರ ಸಂಸ್ಥೆಯಿಂದ ಸಾಧ್ಯವಾದ ಎಲ್ಲಾ ಅನುಕೂಲತೆಗಳನ್ನು ಪಡೆಯುವುದು. ಈಗ ಭಾರತವು ಶೀಘ್ರವಾಗಿ ವಿಶ್ವಮಾರುಕಟ್ಟೆಯಲ್ಲಿ, ಇತರರಿಗೆ ಪೈಪೋಟಿ ನೀಡಿ, ತಾನು ಹೆಚ್ಚಿನ ಲಾಭ ಗಳಿಸಿ, ತನ್ನ ಆಂತರಿಕ ಬಲವನ್ನು ಹೇಗೆ ವೃದ್ಧಿಗೊಳಿಸಬೇಕಾಗಿದೆ ಎಂಬುದನ್ನು ವಿಚಾರಿಸಿ, ಅದಕ್ಕಾಗಿಯೇ ಪ್ರಯತ್ನಿಸಬೇಕಾಗಿದೆ. ಸರಕಾರವೂ ಈ ನಿಟ್ಟಿನಲ್ಲಿ ಜನರನ್ನು ಹುರಿದುಂಬಿಸಿ, ತನ್ನ ನೀತಿಯನ್ನು ರೂಪಿಸಬೇಕಾಗಿದೆ. ವಿಶ್ವಮಾರುಕಟ್ಟೆಯಲ್ಲಿ ತನಗಾಗಿ ಹೊಸ ಹೊಸ ಹಾಗೂ ಬಹುಮುಖ ವ್ಯಾಪಾರೀ ಕ್ಷೇತ್ರಗಳನ್ನು ಅಭಿವೃದ್ಧಿಪಡಿಸಿಕೊಳ್ಳಬೇಕಾಗಿದೆ. ಸವಾಲುಗಳೆಲ್ಲವನ್ನೂ ಸ್ವೀಕರಿಸಿ, ಅವಕಾಶಗಳನ್ನಾಗಿ ಮಾಡಿಕೊಳ್ಳಬೇಕಾಗಿದೆ.

## ಪರಸ್ಪರ ನಿಧಿಗಳು

[11ನೇ ಪುಟದಿಂದ ಮುಂದುವರಿದುದು]

ಬಂಡವಾಳ ವೃದ್ಧಿ/ಅಧಿಕ ಪ್ರತಿಫಲ ನೀಡುವುದು ಹೋಗಲಿ, ಎಷ್ಟೋ ನಿಧಿಗಳು ಹಲವಾರು ಯೋಜನೆಗಳಲ್ಲಿ ಮುಖಬೆಲೆಯಷ್ಟನ್ನು ಕೂಡ ಹೂಡಿಕೆದಾರರಿಗೆ ನೀಡಲಾಗದ ಸ್ಥಿತಿಬಂದಿದೆ. ಹಲವಾರು ಯೋಜನೆಗಳ ಮುಖಬೆಲೆ, ನಿವ್ವಳ ಆಸ್ತಿ, ಮಾರುವ ಬೆಲೆ ಮುಂತಾದ ವಿವರಗಳನ್ನು ನೋಡಿದಾಗ ಪರಸ್ಪರ ನಿಧಿಗಳು ವಿಫಲವಾಗಿವೆ ಎಂದೇ ತೀರ್ಮಾನಿಸಬೇಕಾಗುವುದು.

| ಯೋಜನೆಯ ಹೆಸರು | ಮುಖಬೆಲೆ | ಮಾರುಕಟ್ಟೆಯ ಬೆಲೆ | ನಿವ್ವಳ ಆಸ್ತಿಮೌಲ್ಯ |
|---|---|---|---|
| 1 ಆಪಲ್ ಗೋಲ್ಡ್ ಶೇರ್ | 10.00 | 6.75 | 9.46 |
| 2 ಸೆಂಚುರಿಯನ್ ಕ್ವಾಂಟಮ್ | 10.00 | 7.00 | 9.69 |
| 3 ಮಾರ್ಗನ್ ಸ್ಟ್ಯಾನ್ಲಿ | 10.00 | 7.75 | 8.58 |
| 4 ಇಂಡ್ ನವರತ್ನ | 10.00 | — | 8.41 |
| 5 ಮ್ಯಾಗ್ನಮ್ ಮಲ್ಟಿ ಪ್ಲಾಯರ್ ಪ್ಲಸ್ –1993 | 10.00 | 9.75 | — |
| 6 ಮಾಸ್ಟರ್ ಗೇಯ್ನ್ _92 | 10.00 | 10.00/9.80 | 13.50 |
| 7 ಕ್ಯಾನ್ ಗಂಗಾ | 10.00 | 9.37 | — |

(ಕೆಲವು ಅಂಕಿಗಳಿಗೆ ಪ್ರಜಾವಾಣಿಯ ವಾಣಿಜ್ಯ ಪುರವಣಿ—28.6.95ರ ಪುಟ–1 ಆಧಾರ)

ಪರಸ್ಪರ ನಿಧಿಗಳ ಈ ರೀತಿಯ ವೈಫಲ್ಯಕ್ಕೆ ಕಾರಣ ನಿರ್ವಹಣಾ ವೈಫಲ್ಯವೊ, ತಪ್ಪು ಲೆಕ್ಕಾಚಾರವೊ, ಬಂಡವಾಳ ಮಾರುಕಟ್ಟೆಯ ಸಾಮಾನ್ಯ ಹಿಂಜರಿತವೊ ಅಥವಾ ಎಲ್ಲ ಕಾರಣಗಳ ಒಟ್ಟು ಪರಿಣಾಮವೊ ? ಏನೇ ಇರಲಿ, ಒಟ್ಟಿನ ಮೇಲೆ ಪರಸ್ಪರ ನಿಧಿಗಳು ಭಾರತದಲ್ಲಿ ಅವಸಾನದತ್ತ ಸಾಗಿವೆ.

ಹೀಗೆಯೆ ಮುಂದುವರಿದಲ್ಲಿ ಹೂಡಿಕೆದಾರರ ಅವಕೃಪೆಗೆ ಒಳಗಾಗಿ ದಿವಾಳಿ ಏಳುವುದರಲ್ಲಿ ಯಾವ ಸಂಶಯವೂ ಇಲ್ಲ.

ಹಾಗಾಗುವುದಕ್ಕೆ ಮೊದಲೆ ಪರಸ್ಪರ ನಿಧಿಗಳ ನಿಯಂತ್ರಣಾಧಿಕಾರಿಗಳು/ನಿರ್ವಾಹಕರು ಎಚ್ಚೆತ್ತುಕೊಂಡು ದಕ್ಷತೆಯಿಂದ ಕಾರ್ಯ ನಿರ್ವಹಿಸಿ ಹೂಡಿಕೆದಾರರ ವಿಶ್ವಾಸ ಉಳಿಸಿ ಗಳಿಸಿಕೊಂಡರೆ ಪರಸ್ಪರ ನಿಧಿಗಳಿಗೂ ಕ್ಷೇಮ, ಹಣ ಹೂಡಿಕೆದಾರರಿಗೂ ನೆಮ್ಮದಿ.

ಪರಸ್ಪರ ನಿಧಿಗಳ ಭವಿತವ್ಯ ಇಂದು ಅಳಿವು-ಉಳಿವುಗಳ ಮಧ್ಯೆ ತೂಗುಯ್ಯಾಲೆಯಾಡುತ್ತಿದೆ.

# ಪ್ರಧಾನ ಮಂತ್ರಿಗಳ ರೋಜಗಾರ್ ಯೋಜನೆ

ಜಿ. ಎಸ್. ವಾಸುದೇವ
ಭಾರತೀಯ ಸ್ಟೇಟ್ ಬ್ಯಾಂಕ್, ಸಣ್ಣ ಕೈಗಾರಿಕೆ ಶಾಖೆ, ಮೈಸೂರು

ಜನರ ಬಡತನ, ನಿರುದ್ಯೋಗ ಇತ್ಯಾದಿ ಸಮಸ್ಯೆಗಳನ್ನು ಪರಿಹರಿಸಲು ಭಾರತ ಸರ್ಕಾರ ಆಗಿಂದಾಗ್ಗೆ ಬಗೆಬಗೆಯ ಯೋಜನೆಗಳನ್ನು ರೂಪಿಸುತ್ತ ಬರುತ್ತಿದೆ. ಮರಳಿನಲ್ಲಿ ಮಕ್ಕಳು ಕಟ್ಟುವ ಮನೆಯಂತೆ ಇವು ಉರುಳುತ್ತಲೇ ಇವೆ, ನಿಷ್ಪ್ರಯೋಜಕವೆನಿಸಿವೆ. ಇದೀಗ ಬಂದಿದೆ—ಪ್ರಧಾನ ಮಂತ್ರಿಯ ರೋಜ್‌ಗಾರ್ ಯೋಜನೆ. ಇದು ಹೊಸ ಜಾಡು ಹಿಡಿದೀತೆ ?

ಸ್ವಾತಂತ್ರ್ಯದ ಅನಂತರ ಭಾರತ ಎದುರಿಸಬೇಕಾಗಿ ಬಂದ ಒಂದು ದೊಡ್ಡ ಸಮಸ್ಯೆ ಎಂದರೆ ಇಲ್ಲಿಯ ಜನರ ಬಡತನ ಮತ್ತು ನಿರುದ್ಯೋಗ. ಇದಕ್ಕೆ ಕಾರಣಗಳು ಹಲವಾರು. ಅತಿಯಾದ ಜನಸಂಖ್ಯೆ, ಸಂಪನ್ಮೂಲಗಳ ಅಪೂರ್ಣ ಬಳಕೆ, ದೇಶದ ಬಹುಭಾಗದಲ್ಲಿ ಜನ ಕೃಷಿಯನ್ನೇ ಅವಲಂಬಿಸಿದ್ದು, ಈ ಕೃಷಿಯೂ ಹೆಚ್ಚಾಗಿ ಮಳೆಯನ್ನೇ ನಂಬಿದ್ದು ಆಹಾರೋತ್ಪನ್ನಗಳ ಕೊರತೆ ಸಾಕಷ್ಟು ಇತ್ತು. ಗ್ರಾಮೀಣ ಜನರು ಉದ್ಯೋಗವನ್ನರಸಿ ಪಟ್ಟಣಗಳತ್ತ ವಲಸೆ ಹೋಗಲಾರಂಭಿಸಿ ಇದು ಮತ್ತಷ್ಟು ಸಮಸ್ಯೆಗಳನ್ನು ಹುಟ್ಟುಹಾಕಿತು. ಜೊತೆಗೆ ಶಿಕ್ಷಣ, ತಾಂತ್ರಿಕತೆ, ಮುಂತಾದ ಕ್ಷೇತ್ರಗಳಲ್ಲಿ ಸಾಕಷ್ಟು ಪ್ರಗತಿಯಾಗಿರಲಿಲ್ಲ.

ಮೇಲಿನ ಈ ಎಲ್ಲಾ ಕಾರಣಗಳಿಂದಾಗಿ ನಿರುದ್ಯೋಗದ ಸಮಸ್ಯೆ ಎಲ್ಲೆಡೆ ಹಬ್ಬಿತು. ಇದರ ನಿವಾರಣೆ ಸರ್ಕಾರದ ಆದ್ಯ ಕರ್ತವ್ಯವಾಯಿತು. ಈ ನಿಟ್ಟಿನಲ್ಲಿ ನಡೆದ ಹಲವು ಯೋಜನೆಗಳ ಫಲವಾಗಿ ನೆಹರೂರವರು ಪಂಚವಾರ್ಷಿಕ ಯೋಜನೆಗಳನ್ನು ರೂಪಿಸಿ, ಆ ಮೂಲಕ ದೇಶದ ಉದ್ದಗಲಕ್ಕೂ ಹಲವಾರು ಕೈಗಾರಿಕೆಗಳನ್ನು ಸ್ಥಾಪಿಸಿ, ಸಾವಿರಾರು ಉದ್ಯೋಗಗಳ ಸೃಷ್ಟಿಗೆ ನಾಂದಿ ಹಾಡಿದರು. ಆದರೆ ನಂತರದ ದಿನಗಳಲ್ಲಿ ಆದ, ಈಗಲೂ ಆಗುತ್ತಿರುವ ಜನಜನಸಂಖ್ಯಾ ಸ್ಫೋಟಕ್ಕೆ ಸರಿಸಮನಾಗಿ ಉದ್ಯೋಗಗಳು ಹುಟ್ಟಿಕೊಳ್ಳಲಿಲ್ಲ. ಹಾಗಾಗಿ ಈ ನಿರುದ್ಯೋಗ ಸಮಸ್ಯೆ ಸಾರ್ವಕಾಲಿಕವಾಗಿ ಇದರ ನಿವಾರಣೆಗೆ ಬೇರೆ ಉಪಾಯಗಳನ್ನು ಕಂಡುಕೊಳ್ಳುವ ಅನಿವಾರ್ಯತೆಯುಂಟಾಯಿತು.

ಈ ಪರಿಸ್ಥಿತಿಯಲ್ಲಿ ಸರ್ಕಾರಿ ಕಚೇರಿಗಳಾಗಲಿ, ಖಾಸಗಿ ಮತ್ತಿತರ ವಲಯಗಳಾಗಲಿ, ಸಾಕಷ್ಟು ಉದ್ಯೋಗಗಳ ಸೃಷ್ಟಿಯಲ್ಲಿ ವಿಫಲವಾದಾಗ ಭಾರತ ಸರ್ಕಾರ ಜನರಲ್ಲಿ ಸ್ವಉದ್ಯೋಗದ ಯೋಜನೆಯಿಂದ ಆಶಾಭಾವನೆಯನ್ನು ಮೂಡಿಸಲು ಕೆಲವು ಯೋಜನೆಗಳನ್ನು ತಂದು, ಬ್ಯಾಂಕುಗಳ ಮೂಲಕ ಹಣಕಾಸಿನ ನೆರವು ನೀಡುವ ಕಾರ್ಯ ಆರಂಭಿಸಿತು. ಅವುಗಳಲ್ಲಿ ಕೆಲವನ್ನು ಇಲ್ಲಿ ನೋಡೋಣ.

**1 ವಿದ್ಯಾವಂತ ನಿರುದ್ಯೋಗಿ ಯುವಜನರ ಸ್ವಯಂ ಉದ್ಯೋಗ ಯೋಜನೆ**

ಇದು 80ರ ದಶಕದಲ್ಲಿ ಪ್ರಾರಂಭಗೊಂಡ ಒಂದು ನೂತನ ಪ್ರಯೋಗ. ನಗರ ಪ್ರದೇಶಗಳಲ್ಲಿನ ವಿದ್ಯಾವಂತ ನಿರುದ್ಯೋಗಿಗಳಿಗಾಗಿ ಬ್ಯಾಂಕುಗಳು ಧನಸಹಾಯಮಾಡಿ, ಜೀವನಕ್ಕೆ ಮಾರ್ಗ ಕಲ್ಪಿಸುವ ಸಲುವಾಗಿ ಹಮ್ಮಿಕೊಂಡ ಯೋಜನೆಯಿದು. ಇದರಲ್ಲಿ ರೂ. 25,000ದಷ್ಟು ಧನಸಹಾಯವೂ, ಶೇ. 25ರಷ್ಟು ಸಹಾಯ ಧನವೂ ದೊರೆಯುತ್ತಿತ್ತು.

**2 ನಗರ ಪ್ರದೇಶದ ಬಡವರ ಸ್ವಯಂ ಉದ್ಯೋಗ ಯೋಜನೆ**

ನಗರ ಪ್ರದೇಶಗಳಲ್ಲಿರುವ ಬಡಜನರು ಬ್ಯಾಂಕಿನ ಧನಸಹಾಯದಿಂದ ಯಾವುದಾದರೊಂದು ಸ್ವಯಂ ಉದ್ಯೋಗ ಕಲ್ಪಿಸಿಕೊಂಡು, ಜೀವನೋಪಾಯಕ್ಕೆ ಮಾರ್ಗ ಕಂಡುಕೊಳ್ಳುವ ಸಲುವಾಗಿ ಮೂಡಿಬಂದ ಯೋಜನೆಯಿದು. ಇದರಲ್ಲಿ 10ರಿಂದ 15 ಸಾವಿರದಷ್ಟು ಧನಸಹಾಯ ಸಿಗುತ್ತಿತ್ತು.

**3 ನಗರ ಪ್ರದೇಶದ ಸಣ್ಣ ಉದ್ದಿಮೆಗಳ ಯೋಜನೆ**

ಕೈಗಾರಿಕೆಗಳ ಅಭಿವೃದ್ಧಿಗಾಗಿ ಹಲವಾರು ನಗರ ಪ್ರದೇಶಗಳಲ್ಲಿ ಹಾಗೂ ಅವುಗಳ ಸುತ್ತಮುತ್ತ ಕೈಗಾರಿಕಾ ವಲಯಗಳನ್ನು ಅಭಿವೃದ್ಧಿಪಡಿಸಿದಾಗ ಕೈಗಾರಿಕೆಗಳ ಜೊತೆಗೇ ಅವುಗಳಿಗೆ ಬೇಕಾದ ಹಲವಾರು ಸಣ್ಣಪುಟ್ಟ ವಸ್ತುಗಳನ್ನು ತಯಾರಿಸಿಕೊಡುವ ಹಲವಾರು ಸಣ್ಣ ಉದ್ದಿಮೆಗಳ ಆವಶ್ಯಕತೆ ಉಂಟಾದಾಗ ಈ ಅವಕಾಶವನ್ನು ಇನ್ನೂ ಹೆಚ್ಚಾಗಿ ಉಪಯೋಗಪಡಿಸಿಕೊಳ್ಳಲು, ಈ ಸಣ್ಣ ಉದ್ದಿಮೆ ಸ್ಥಾಪನೆಗೆ ಬ್ಯಾಂಕಿನಿಂದ ಹಣಕಾಸು ನೆರವು ನೀಡುವ ಯೋಜನೆ 91–92ರಲ್ಲಿ ಪ್ರಾರಂಭಗೊಂಡಿತು. ಇದರಲ್ಲಿ ಜಿಲ್ಲಾ ಕೈಗಾರಿಕಾ ಕೇಂದ್ರ ಅಥವಾ ಮತ್ತಿತರ ಸರ್ಕಾರಿ ಅನುಮೋದಿತ ಸಂಸ್ಥೆಯಿಂದ ಪರಿಶೀಲನೆಗೊಂಡು ಬಂದ ಅರ್ಜಿಗಳನ್ನು ನೋಡಿ ಬ್ಯಾಂಕಿನಿಂದ ಸಾಲ ವಿಲೇವಾರಿಯಾಗುತ್ತಿತ್ತು.

4 ಜವಹರ್ ರೋಜಗಾರ್ ಯೋಜನೆ

80ರ ದಶಕದ ಅಂತ್ಯದಲ್ಲಿ ಜಾರಿಗೆ ಬಂದ ಈ ಯೋಜನೆಗನು ಗುಣವಾಗಿ ಆದಷ್ಟೂ ಉದ್ಯೋಗಗಳನ್ನು ಕಲ್ಪಿಸಲು ನಾಡಿನ ಮೂಲೆಮೂಲೆಗಳಲ್ಲಿ ಸರ್ಕಾರದ ವತಿಯಿಂದ ಕಾಮಗಾರಿ ಇನ್ನಿತರ ಕೆಲಸಗಳನ್ನು ಪ್ರಾರಂಭಿಸಿ ಅವುಗಳ ಮೂಲಕ ಸಾವಿರಾರು ಜನರಿಗೆ ಉದ್ಯೋಗವಕಾಶ ಕಲ್ಪಿಸಲಾಯಿತು. ಆದರೆ ಈ ಯೋಜನೆಯಲ್ಲಿ ಕೆಲಸ ಮಾಡುವ ಅವಕಾಶ ತಾತ್ಕಾಲಿಕವಾಗಿತ್ತು.

ಅಲ್ಲದೆ ಮೇಲಿನ ಮೊದಲ ಮೂರು ಯೋಜನೆಗಳ ಉದ್ದೇಶ ಗಳು ಒಳ್ಳೆಯವಾಗಿದ್ದರೂ, ಅವನ್ನು ಜಾರಿಮಾಡುವಲ್ಲಿ ಆಗುವ ತೊಂದರೆಗಳು, ಸಾಲ ಪಡೆದವರು ಹೆಚ್ಚಿನ ಅಂಶ ಮರುಪಾವತಿ ಮಾಡದಿದ್ದುದು ಮುಂತಾದವು ಈ ಯೋಜನೆಗಳ ವಿಫಲತೆಗೆ ಕಾರಣವಾದವು. ಹಾಗಾಗಿ ನಿರುದ್ಯೋಗ ಸಮಸ್ಯೆಗೆ ಆದಷ್ಟು ಪೂರ್ಣಪ್ರಮಾಣದ ಪರಿಹಾರ ಕಾಣುವ ಆವಶ್ಯಕತೆಯಿತ್ತು.

ಹಿಂದಿನ ಎಲ್ಲಾ ಕಾರ್ಯಕ್ರಮಗಳ ಧನಾತ್ಮಕ ಅಂಶಗಳನ್ನು ಒಟ್ಟುಗೂಡಿಸಿ ಒಂದು ಹೊಸ ಯೋಜನೆ ಜಾರಿಗೆ ತರುವ ಉದ್ದೇಶವನ್ನು ಹೊಂದಿದ್ದ ಈಗಿನ ಪ್ರಧಾನಿಗಳು ತಮ್ಮ 15–8–93ರ ಸ್ವಾತಂತ್ರ್ಯೋತ್ಸವ ಭಾಷಣದಲ್ಲಿ ಒಂದು ನೂತನ ಕಾರ್ಯಕ್ರಮವನ್ನು ಜಾರಿಗೆ ತರುವುದಾಗಿ ಘೋಷಿಸಿದರು. ಇದರ ಫಲವೇ 'ಪ್ರಧಾನ ಮಂತ್ರಿಗಳ ರೋಜ್‌ಗಾರ್' ಯೋಜನೆ. ಇದು 2-10-93ರಂದು ಜಾರಿಗೆ ಬಂದಿತು.

### ಹೊಸ ಯೋಜನೆಯ ರೂಪುರೇಷೆಗಳ ಉದ್ದೇಶ

ಉತ್ಪಾದನೆ, ಸೇವೆ ಹಾಗೂ ವ್ಯಾಪಾರ ಸಾಹಸೋದ್ಯಮಗಳಲ್ಲಿ ನಿರಂತರ ಉದ್ಯೋಗ ಅವಕಾಶಕ್ಕಾಗಿ ಸಣ್ಣ ಉದ್ದಿಮೆಗಳ ಸ್ಥಾಪನೆಗೆ ಪ್ರೋತ್ಸಾಹ ಕೊಡುವುದು.

### ಅರ್ಹತೆ

18ರಿಂದ 35 ವರ್ಷದವರೆಗಿದ್ದು, ಮೆಟ್ರಿಕ್‌ವರೆಗೆ ಓದಿರುವಂತಹ ಯುವಜನರಾಗಿದ್ದು, ಕುಟುಂಬದ ಆದಾಯ ವಾರ್ಷಿಕ 24000/- ರೂ.ಗಳನ್ನು ಮೀರಿರಬಾರದು.

ಕೈಗಾರಿಕಾ ತರಬೇತಿ ಕೇಂದ್ರದಲ್ಲಿ ಕನಿಷ್ಠ 6 ತಿಂಗಳ ತರಬೇತಿ ಪಡೆದವರಿಗೆ, ಮಹಿಳೆಯರಿಗೆ, ಪರಿಶಿಷ್ಟ ಜಾತಿ, ವರ್ಗ ಹಾಗೂ ಹಿಂದುಳಿದ ವರ್ಗದ ಜನರಿಗೆ ಆದ್ಯತೆ ನೀಡಲಾಗುವುದು.

ಒಂದು ಕುಟುಂಬದಲ್ಲಿ ಒಬ್ಬರಿಗೆ ಮಾತ್ರ ಸಾಲ ನೀಡಬಹುದು. ಕುಟುಂಬದ ಇನ್ನಾವುದೇ ಸದಸ್ಯ ಯಾವುದೇ ಸಂದರ್ಭದಲ್ಲಿ ಬೇರಾವುದೇ ಬ್ಯಾಂಕಿಗೆ ಕಟಬಾಕಿದಾರರಾಗಿರಬಾರದು.

ಅರ್ಜಿದಾರರು ಆಯಾ ಪ್ರದೇಶದಲ್ಲಿ ಕನಿಷ್ಠ 3 ವರ್ಷದಿಂದ ಖಾಯಂ ನಿವಾಸಿಯಾಗಿರಬೇಕು.

### ಸಾಲ ಪಡೆಯುವ ವಿಧಾನ

ಜಿಲ್ಲಾ ಕೈಗಾರಿಕಾ ಕೇಂದ್ರ, ಸಣ್ಣ ಕೈಗಾರಿಕಾ ಸೇವಾ ಸಂಸ್ಥೆ, ಇನ್ನಿತರ ಸಂಸ್ಥೆಗಳು ಆಸಕ್ತರಿಂದ ಅರ್ಜಿಗಳನ್ನು ಸ್ವೀಕರಿಸಿ, ಅವನ್ನು ಜಿಲ್ಲಾ ಮಟ್ಟದ ಪ್ರ.ಮಂ.ರೋ ಯೋಜನಾ ಸಮಿತಿಗೆ ಕಳುಹಿಸುತ್ತವೆ. ಅಲ್ಲಿ ಈ ಅರ್ಜಿಗಳನ್ನು ಪರಾಮರ್ಶಿಸಿ ಅರ್ಹ ಅಭ್ಯರ್ಥಿಗಳ ಅರ್ಜಿಗಳನ್ನು ಆ ಪ್ರದೇಶದ ಬ್ಯಾಂಕಿನ ಶಾಖೆಗಳಿಗೆ ಕಳುಹಿಸಿದ ಮೇಲೆ, ಬ್ಯಾಂಕಿನಿಂದ ಅರ್ಹ ಅಭ್ಯರ್ಥಿಗೆ ಆತನ ಯೋಜನೆ, ಹಾಗೂ ಆವಶ್ಯಕತೆಗೆ ಅನುಗುಣವಾಗಿ, ಗರಿಷ್ಠ ರೂ. 95,000ದವರೆಗೆ ನೆರವು ದೊರೆಯುತ್ತದೆ. ಇದನ್ನು ಸಂಯುಕ್ತ ಸಾಲವನ್ನಾಗಿ (ದುಡಿಯುವ ಬಂಡವಾಳ ಅವಧಿ ಸಾಲ) ಬ್ಯಾಂಕು ನೀಡುತ್ತದೆ. ಇದಕ್ಕೆ ಯಾವುದೇ ಭದ್ರತೆಯನ್ನು ಸಾಲಗಾರ ಕೊಡುವ ಆವಶ್ಯಕತೆಯಿಲ್ಲ. ಆದರೆ ಶೇ. 5ರಷ್ಟು ಸ್ವಭಾಗವನ್ನು ಮಾತ್ರ ತರಬೇಕಾಗುತ್ತದೆ.

ಇಬ್ಬರು ಅಥವಾ ಹೆಚ್ಚಿನ ಜನರು ಪಾಲುದಾರಿಕೆಯಲ್ಲಿ ಆರಂಭ ಮಾಡಿದ ಯೋಜನೆಗೆ ಪ್ರತಿ ಪಾಲುದಾರನಿಗೆ ರೂ. 95,000 ರಂತೆ ಲೆಕ್ಕ ಹಾಕಿ ಸಾಲದ ಗರಿಷ್ಠ ಮಿತಿಯನ್ನು ನಿರ್ಣಯಿಸಲಾಗು ವುದು.

**ತರಬೇತಿ :** ಆಯ್ಕೆಯಾದ ಅರ್ಹ ಅಭ್ಯರ್ಥಿಗಳಿಗೆ ಸರಕಾರವೇ 6 ತಿಂಗಳ ಕನಿಷ್ಠ ತರಬೇತಿಯನ್ನು ನೀಡುತ್ತದೆ.

### ಸಾಲ ಮರುಪಾವತಿ

ಸಾಲ ಪಡೆದ 6ರಿಂದ 8 ತಿಂಗಳ ನಂತರ, ಯೋಜನೆಗನುಗುಣ ವಾಗಿ ಅವಧಿ ಸಾಲದ ಮರುಪಾವತಿ ಪ್ರಾರಂಭವಾಗುತ್ತದೆ. ಇದಕ್ಕೆ 3ರಿಂದ 7 ವರ್ಷಗಳ ಕಾಲಾವಕಾಶವುಂಟು. ದುಡಿಯುವ ಬಂಡವಾಳವನ್ನು ಆಗಾಗ್ಗೆ ನವೀಕರಿಸಲಾಗುತ್ತದೆ.

**ಬಡ್ಡಿಯ ದರ:** ಇನ್ನಾವುದೇ ಸಾಲಗಳಿಗಿದ್ದಂತೆ, ಸಾಲ ಕೊಟ್ಟ ಹಣಕ್ಕೆ ಅನುಗುಣವಾಗಿ ಬಡ್ಡಿಯ ದರ ಇರುತ್ತದೆ.

### ಸಹಾಯಧನ

ಸರ್ಕಾರದಿಂದ ಈ ಯೋಜನೆಗೆ ಪ್ರತಿ ಸಾಲಗಾರನಿಗೂ ಗರಿಷ್ಠ ರೂ. 7,500/-ರಂತೆ ಶೇ. 15ಕ್ಕೆ ಮೀರದ ಸಹಾಯಧನ ಸೌಲಭ್ಯವಿದೆ. ಈ ಹಣವನ್ನು ಬ್ಯಾಂಕುಗಳು ತಮ್ಮ ಮೇಲು ಕಚೇರಿಯಿಂದ ತರಿಸಿಕೊಂಡು ಅದನ್ನು ಸಾಲುಗಾರನ ಹೆಸರಿನಲ್ಲಿ ಸಾವಧಿ ಠೇವಣಿಯಾಗಿ ಇಟ್ಟು, ಬಡ್ಡಿ ಹಾಗೂ ಅವಧಿ ನಂತರ ಅಸಲನ್ನು ಅವಧಿ ಸಾಲದ ಮರುಪಾವತಿಗೆ ಉಪಯೋಗಿಸ ಬಹುದು.

ಇದಲ್ಲದೆ 94ರ ಜೂನ್‌ನಿಂದ, ಕರ್ನಾಟಕ ಸರ್ಕಾರದ ಉದ್ಯೋಗ ಜ್ಯೋತಿ ಯೋಜನೆಯಡಿಯಲ್ಲಿ ಸಮರ್ಪಕವಾಗಿ ಸಾಲ ಮರುಪಾವತಿ ಮಾಡುವ ಪ್ರತಿಯೊಬ್ಬ ಸಾಲಗಾರನಿಗೂ 3 ವರ್ಷಗಳವರೆಗೆ ಶೇ. 4ರಷ್ಟು ಬಡ್ಡಿ ಸಹಾಯ ಧನ ದೊರೆಯು

[24ನೇ ಪುಟ ನೋಡಿ]

# 'ಬ್ಯಾಂಕಿಂಗ್ ಸುದ್ದಿ ಸಾರ'

ಜಿಎಸ್ಸಾರ್

**ಠೇವಣಿ ವಿಮಾ ಮತ್ತು ಖಾತರಿ ನಿಗಮದ ಉದರಿ ಖಾತರಿ ನಿಯಮಗಳಲ್ಲಿ ಬದಲಾವಣೆ**

ಬ್ಯಾಂಕುಗಳು ತಮ್ಮ ಉದರಿ ನಿರ್ವಹಣಾ ಕಾರ್ಯದಲ್ಲಿ ಎದುರಾಗುವ ನಷ್ಟಸಂಭಾವ್ಯತೆಯ ಪ್ರಮಾಣವನ್ನು ಕಡಿಮೆ ಮಾಡಿಕೊಳ್ಳುವಲ್ಲಿ ಠೇವಣಿ ವಿಮಾ ಮತ್ತು ಉದರಿ ಖಾತರಿ ನಿಗಮ ಬಹಳ ಮುಖ್ಯವಾದ ಪಾತ್ರವನ್ನು ವಹಿಸುತ್ತಾ ಬಂದಿದೆ. ಬ್ಯಾಂಕುಗಳು ಹೆಚ್ಚು ಹೆಚ್ಚು ಉದರಿ ನೀಡುವಂತೆ ಕೂಡ ಈ ನಿಗಮ ಪರೋಕ್ಷವಾಗಿ ಸ್ಫೂರ್ತಿಯನ್ನು ನೀಡುತ್ತಾ ಬಂದಿದೆ ಕೂಡ. ಆದರೆ, ತನ್ನ ಇದುವರೆಗಿನ ಉದರಿಗೆ ಖಾತರಿ ನೀಡುವ ವ್ಯವಹಾರದಲ್ಲಿನ ರೀತಿಯಿಂದ ತನ್ನ ಭದ್ರತೆಗೆ ಸಂಕಷ್ಟ ಒದಗಿಬರುವುದರಿಂದ ಉದರಿ ನೀಡುವ ಬ್ಯಾಂಕುಗಳನ್ನೇ ಹೆಚ್ಚು ಹೆಚ್ಚು ಜವಾಬ್ದಾರಿಯುತವಾಗಿ ಕಾರ್ಯ ನಿರ್ವಹಿಸುವಂತೆ ತನ್ನ ಉದರಿ ಖಾತರಿಗೆ ನಿಯಮಗಳಲ್ಲಿ ಬದಲಾವಣೆಗಳನ್ನು ತಂದಿದೆ. ಈ ಸಂಬಂಧವಾಗಿ ಇತ್ತೀಚೆಗೆ ನಿಗಮ ಬ್ಯಾಂಕುಗಳಿಗೆ ನೀಡಿರುವ ನಿಯಮಗಳು ತುಸು ಕಠಿಣವಾಗಿಯೆ ಇವೆ. ಅವುಗಳೆಂದರೆ :

* ಬ್ಯಾಂಕುಗಳು ತಮ್ಮ ಪ್ರತಿಯೊಂದು ಆದ್ಯತಾ ವಲಯದ ಕರಡು ಋಣದಲ್ಲಿ ಶೇಕಡಾ 25ರಷ್ಟು ವಸೂಲಾತಿ ಮಾಡಿದ ನಂತರವೆ ನಿಗಮಕ್ಕೆ ಉದರಿ ಖಾತರಿ ಸವಲತ್ತನ್ನು ಪಡೆಯಲು ಅರ್ಜಿ ಹಾಕಬೇಕು.
* ಅಂತಹ ಖಾತೆಗಳನ್ನು ಬ್ಯಾಂಕುಗಳು ಲೆಕ್ಕದಿಂದ ತೆಗೆದುಹಾಕಿರಬೇಕು.

ನಿಗಮದ ಎರಡನೆ ನಿಯಮದಂತೆ ನಡೆದುಕೊಳ್ಳಬೇಕಾದರೆ ಬ್ಯಾಂಕುಗಳು ಇನ್ನೂ ಹೆಚ್ಚು ಮೊಬಲಗನ್ನು ತೆಗೆದಿರಿಸಬೇಕಾಗುತ್ತದೆ ಅಥವಾ ನಿಗಮವೇ ತಿಳಿಸಿರುವಂತೆ ತಮ್ಮ ಉದರಿ ಖಾತರಿ ಯೋಜನೆಗಳಿಂದ, ಬ್ಯಾಂಕುಗಳು ಇಷ್ಟಪಟ್ಟಲ್ಲಿ, ದೂರಾಗಬೇಕಾಗುತ್ತದೆ. ತಮ್ಮ ಉದರಿ ಖಾತರಿ ಸಾಲದ ಅಸಲಿಗೆ ಅನುಗುಣವಾಗಿರುತ್ತದೆ ಅಷ್ಟೇ ಎಂಬುದನ್ನೂ ನಿಗಮ ಸ್ಪಷ್ಟಪಡಿಸಿರುವುದರಿಂದ ಬ್ಯಾಂಕುಗಳು ನಿಗಮದಿಂದ ತಮಗೆ ಅಷ್ಟೇನೂ ಪ್ರಯೋಜನವಾಗಲಾರದೆಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿರುವುದರಿಂದ ನಿಗಮದಿಂದ ದೂರಾಗಿಯೆ ಉಳಿಯುವುವೇನೋ ಎಂಬುದನ್ನು ಕಾದು ನೋಡಬೇಕು.

**ಬ್ಯಾಂಕೇತರ ಹಣಕಾಸು ಸಂಸ್ಥೆಗಳು**

ಇತ್ತೀಚಿನ ದಿನಗಳ ಬ್ಯಾಂಕೇತರ ಹಣಕಾಸು ಸಂಸ್ಥೆಗಳು ಸಾರ್ವಜನಿಕರಿಂದ ಠೇವಣಿ ಸಂಗ್ರಹಿಸುವಲ್ಲಿ ಅತಿ ಹೆಚ್ಚಿನ ಬಡ್ಡಿದರಗಳನ್ನು ಹಾಗೂ ಇನ್ನಿತರ ಆಮಿಷಗಳನ್ನು ಒಡ್ಡುತ್ತಿವೆ. ಇಂತಹ ಜಾಹಿರಾತಿನಿಂದ ಮೋಸ ಹೋದವರೂ ಬಹಳಷ್ಟು ಮಂದಿ. ಉದಾರೀಕರಣದ ಅಡಿಯಲ್ಲಿ ಅತಿ ವೇಗವಾಗಿ ಬೆಳೆದಿರುವ ಇಂತಹ ಕಂಪನಿಗಳ ಠೇವಣಿ ಸಂಗ್ರಹಣ ಕಾರ್ಯವಿಧಾನವನ್ನು ಪರಿವೀಕ್ಷಣೆ ಮಾಡಲು ಭಾರತೀಯ ರಿಸರ್ವ್ ಬ್ಯಾಂಕು ಪರಿಣತರ ತಂಡವನ್ನು ನೇಮಕ ಮಾಡಿ ಕಳಿಸಿದೆ. ಈ ಹಣಕಾಸಿನ ವರ್ಷದಲ್ಲಿ ಬ್ಯಾಂಕೇತರ ಹಣಕಾಸು ಸಂಸ್ಥೆಗಳ ಕಾರ್ಯವನ್ನು ಇಷ್ಟೊಂದು ವ್ಯಾಪಕವಾಗಿ ಕೇಂದ್ರಬ್ಯಾಂಕು ಪರಿವೀಕ್ಷಣೆ ಮಾಡುತ್ತಿರುವುದು ಇದು ಎರಡನೆಯ ಬಾರಿ.

**ಸಕುರಾ ಬ್ಯಾಂಕ್**

ಜಪಾನಿನ ಸಕುರಾ ಬ್ಯಾಂಕು ಬಾಂಬೆಯ ಖಿವ್‌ಜಿ ವಿಸ್ರಮ್ ಸಂಸ್ಥೆಯ ಸಹಯೋಗದೊಂದಿಗೆ ಹಣಕಾಸು ಸೇವೆಯ ಕಂಪನಿಯೊಂದನ್ನು ಬಾಂಬೆಯಲ್ಲಿ ತೆರೆಯಲು ಒಪ್ಪಂದ ಮಾಡಿಕೊಂಡಿದೆ. ಮಿಟ್ಸುಯಿ ಬ್ಯಾಂಕಿನ ಸಮೂಹದಲ್ಲೊಂದಾದ ಸಕುರಾ ಬ್ಯಾಂಕು ವಿಶ್ವದ ನಾಲ್ಕನೇ ದೊಡ್ಡ ಬ್ಯಾಂಕಾಗಿದ್ದು, ಅದರ ಆಸ್ತಿ ಡಾಲರ್ 584 ಬಿಲಿಯನ್ನುಗಳು. ಬಾಂಬೆಯಲ್ಲಿ ತೆರೆಯಲಾಗುವ ಹೊಸ ಕಂಪನಿಯ ಹೆಸರು 'ಸಕುರಾ ಭಾರತ ಬಂಡವಾಳ ಕಂಪನಿ ನಿಯಮಿತ'. ಭಾರತದಲ್ಲಿ ಇಂತಹದೊಂದು ಸಂಸ್ಥೆ ಜಪಾನಿನ ಬ್ಯಾಂಕಿನ ಆಶ್ರಯದಲ್ಲಿ ತೆರೆಯಲಾಗುತ್ತಿರುವುದು ಇದೇ ಮೊದಲು. ಹೊಸ ಕಂಪನಿಯ ಪಾವತಿಯಾದ ಬಂಡವಾಳ ರೂ 23 ಕೋಟಿಯಾಗಿದ್ದು, ಸಕುರಾ ಬ್ಯಾಂಕು ಶೇ. 75ರಷ್ಟು ಸಾಮ್ಯ ಷೇರು ಹೊಂದಿರುತ್ತದೆ. ಶ್ರೀ ಸಿ. ಎಚ್. ಮಿರಾನಿ ಈ ಸಹಯೋಗದ ಕಂಪನಿಯ ಅಧ್ಯಕ್ಷರಾಗಿದ್ದರೆ, ಸಕುರಾ ಬ್ಯಾಂಕಿನ ಶ್ರೀ ತೋಷಿಯಾಕಿ ಕೊಬಾಯಾಷಿ ವ್ಯವಸ್ಥಾಪಕ ನಿರ್ದೇಶಕರಾಗಿದ್ದಾರೆ.

**ಬ್ಯಾಂಕುಗಳ ಹೊಸ ಶಾಖೆಗಳು**

ಭಾರತೀಯ ರಿಸರ್ವ್ ಬ್ಯಾಂಕು ಸಾರ್ವಜನಿಕ ಕ್ಷೇತ್ರದ ನಾಲ್ಕು ಬ್ಯಾಂಕುಗಳಿಗೆ ಹೊಸ ಶಾಖೆಗಳನ್ನು ತೆರೆಯಲು ಸ್ವಾತಂತ್ರ್ಯವನ್ನು ಕೊಟ್ಟಿದೆ. ಹೊಸ ಶಾಖೆ ಸಂಖ್ಯೆಗಳಿಗೆ ಮಿತಿ ಇಲ್ಲ, ಜೊತೆಗೆ ತನಗಿಷ್ಟ ಬಂದ ಕಡೆ ಶಾಖೆಗಳನ್ನು ತೆರೆಯುವ ಸೌಲಭ್ಯ ಕೂಡ ಇದೆ. ಆದರೆ ಶಾಖೆಗಳನ್ನು ಹೊರ ದೇಶದಲ್ಲಿ ಮಾತ್ರ ತೆರೆಯುವಂತಿಲ್ಲ. ಕೆನರಾ ಬ್ಯಾಂಕು, ಓರಿಯಂಟಲ್ ಬ್ಯಾಂಕ್ ಆಫ್ ಕಾಮರ್ಸ್, ಕಾರ್ಪೊರೇಷನ್ ಬ್ಯಾಂಕು ಮತ್ತು ಯೂನಿಯನ್ ಬ್ಯಾಂಕ್ ಆಫ್ ಇಂಡಿಯಾ ಇವೇ ಆ ನಾಲ್ಕು ಬ್ಯಾಂಕುಗಳು.

## ಖಾಸಗಿ ಬ್ಯಾಂಕುಗಳ ಠೇವಣಿ ಸಂಗ್ರಹಣೆ

ಏಪ್ರಿಲ್ 1994ರಿಂದ ಕಾರ್ಯಾರಂಭ ಮಾಡಿರುವ ಎಂಟು ಖಾಸಗಿ ಕ್ಷೇತ್ರದ ಬ್ಯಾಂಕುಗಳು ಸೆಪ್ಟೆಂಬರ್ 1995ರ ಕೊನೆಯಲ್ಲಿ ರೂ. 4200 ಕೋಟಿಯಷ್ಟು ಠೇವಣಿ ಸಂಗ್ರಹ ಮಾಡಿವೆ. ಈ ಎಂಟೂ ಬ್ಯಾಂಕುಗಳು ಸೇರಿ ಒಟ್ಟು 47 ಶಾಖೆಗಳಿದ್ದು ಒಟ್ಟು ಪಾವತಿಯಾದ ಬಂಡವಾಳ ರೂ. 995 ಕೋಟಿ. ಖಾಸಗಿ ಕ್ಷೇತ್ರದ ಸ್ಪರ್ಧೆಗೆ ಇದೊಂದು ನಿದರ್ಶನವೆ ?

## ಸಾವಧಿ ಠೇವಣಿ ಹಾಗೂ ಮೂಲದಲ್ಲಿ ತೆರಿಗೆ ಕಡಿತ

ಬ್ಯಾಂಕುಗಳ ಸಾವಧಿ ಠೇವಣಿಗಳ ಮೇಲಿನ ಬಡ್ಡಿಯನ್ನು ಆದಾಯವೆಂದು ಗುರುತಿಸಿ ಅದನ್ನು ಮೂಲದಲ್ಲಿಯೆ ತೆರಿಗೆಗಾಗಿ ಕಡಿತಮಾಡುವಂತೆ ಈ ಹಿಂದೆ ಆರ್ಥಿಕ ಮಂತ್ರಾಲಯ ನಿರ್ದೇಶನ ಹೊರಡಿಸಿತ್ತು. ಜುಲೈ 1995ಕ್ಕೆ ಮುಂಚಿತವಾಗಿ ನವೀಕರಣಗೊಂಡ ಸಾವಧಿ ಠೇವಣಿಗಳನ್ನು ಹೊರತುಪಡಿಸಿ, ಉಳಿದೆಲ್ಲಾ ಠೇವಣಿಗಳನ್ನೂ ಈ ಯೋಜನೆಗೆ ಸೇರಿಸಲು ತೀರ್ಮಾನಿಸಲಾಗಿತ್ತು. ಈಗ ಈ ಯೋಜನೆಯನ್ನು ಜನವರಿ 1, 1996ರಿಂದ ಜಾರಿಗೆ ತರುವಂತೆ ಘೋಷಿಸಲಾಗಿದೆ. ರೂ. 10,000 ಮಾಸಿಕ ಬಡ್ಡಿ ಗಳಿಸುವ ಮೂಲದಲ್ಲಿ ತೆರಿಗೆ ಕಡಿತದ ವ್ಯಾಪ್ತಿಗೆ ಒಳಪಟ್ಟಿರುತ್ತವೆ.

## ಮಾರುಕಟ್ಟೆಯ ಪ್ರಧಾನ ವ್ಯವಹಾರಿ ಹಣಕಾಸು ಸಂಸ್ಥೆಗಳು

ಭಾರತೀಯ ರಿಸರ್ವ್ ಬ್ಯಾಂಕು ಆರು ಹಣಕಾಸು ಸಂಸ್ಥೆಗಳಿಗೆ, ಬ್ಯಾಂಕುಗಳನ್ನೊಳಗೊಂಡಂತೆ, ಮಾರುಕಟ್ಟೆಯ ಅಧಿಕೃತ ಪ್ರಧಾನ ವ್ಯವಹಾರಗಳ ಸ್ಥಾನವನ್ನು ತತ್ವಶಃ ನೀಡಿದೆ. ಆ ಸಂಸ್ಥೆಗಳೆಂದರೆ, 1 ಡಿಸ್ಕೌಂಟ್ ಅಂಡ್ ಫೈನಾನ್ಸ್ ಹೌಸ್ ಆಫ್ ಇಂಡಿಯ, 2 ಸೆಕ್ಯೂರಿಟೀಸ್ ಟ್ರೇಡಿಂಗ್ ಕಾರ್ಪೊರೇಷನ್ ಆಫ್ ಇಂಡಿಯ, 3 ಐಸಿಐಸಿಐ ಸೆಕ್ಯೂರಿಟೀಸ್ ಅಂಡ್ ಫೈನಾನ್ಸ್, 4 ಪಂಜಾಬ್ ನ್ಯಾಷನಲ್ ಬ್ಯಾಂಕ್, 5 ಕೆನರಾ ಬ್ಯಾಂಕ್ ಹಾಗೂ 6 ಭಾರತೀಯ ಸ್ಟೇಟ್ ಬ್ಯಾಂಕು ಇವೇ ಆ ಆರು ಹಣಕಾಸು ಸಂಸ್ಥೆಗಳು. ಪ್ರಧಾನ ವ್ಯಾಪಾರಿಗಳ ಪರಿಕಲ್ಪನೆ ಸರಕಾರಿ ಬಂಡವಾಳ ಪತ್ರಗಳ ಮಾರುಕಟ್ಟೆಯನ್ನು, ಮೇಲಣ ಸ್ತರದ ಮಾರುಕಟ್ಟೆಯನ್ನು ವಿಸ್ತರಿಸಲು, ಮಾರುಕಟ್ಟೆಯಲ್ಲಿ ಹೆಚ್ಚಿನ ದ್ರವತ್ವವನ್ನು ತಂದು ಕೊಡಲು ಹಾಗೂ ಸರಕಾರಿ ಬಂಡವಾಳಪತ್ರಗಳ ವಹಿವಾಟನ್ನು ಹೆಚ್ಚಿಸಲು ಜಾರಿಮಾಡಲಾಗಿದೆ. ರಾಷ್ಟ್ರೀಕೃತ ಬ್ಯಾಂಕುಗಳಂತೂ ಈ ರೀತಿ ಪರವಾನಗಿ ಪಡೆದದ್ದರಿಂದ ಈ ವ್ಯವಹಾರಕ್ಕೆಂದೇ ಮೀಸಲಾದ ಸಹಾಯಕ ಸಂಸ್ಥೆಗಳನ್ನು ತೆರೆಯುವ ಹುಮ್ಮಸ್ಸಿನಲ್ಲಿವೆ. ಭಾರತೀಯ ಸ್ಟೇಟ್ ಬ್ಯಾಂಕಂತೂ ಈ ನಿಟ್ಟಿನಲ್ಲಿ ಮತ್ತೊಂದು ಸಹಾಯಕ ಸಂಸ್ಥೆಗೆ—ಎಸ್ ಬಿ ಐ ಗಿಲ್ಟ್ ಅಂಡ್ ಸೆಕ್ಯೂರಿಟೀಸ್—ತಯಾರಾಗಿದ್ದು, ರಿಸರ್ವ್ ಬ್ಯಾಂಕಿನ ಪರವಾನಗಿ ಪಡೆಯುವುದರಲ್ಲಿಯೂ ಸಫಲವಾಗಿದೆ.

## ಯಾವುದೇ ಶಾಖೆಯಲ್ಲಿ ಬ್ಯಾಂಕಿಂಗ್

ರಾಷ್ಟ್ರೀಕೃತ ಬ್ಯಾಂಕಾದ ವಿಜಯಾ ಬ್ಯಾಂಕು ಗ್ರಾಹಕರ ಸೇವೆಯಲ್ಲಿ ಒಂದು ಹೊಸ ಹೆಜ್ಜೆಯನ್ನಿರಿಸಿದೆ. ಯಾವುದೇ ಒಂದು ಶಾಖೆಯ ಗ್ರಾಹಕ ವಿಜಯಾ ಬ್ಯಾಂಕಿನ ಎಲ್ಲಾ ಶಾಖೆಗಳ ಗ್ರಾಹಕನೂ ಆಗಿ ಆ ಶಾಖೆಗಳಲ್ಲಿ ಬ್ಯಾಂಕಿಂಗ್ ವ್ಯವಹಾರ ನಡೆಸುವಂತಾಗುವ ಹೊಸ ಹೆಜ್ಜೆ ಅದು. ಬಾಂಬೆಯಲ್ಲಿ ಪ್ರಾಯೋಗಿಕವಾಗಿ ಆರು ಶಾಖೆಗಳನ್ನು ಆರಿಸಿಕೊಂಡು ಕಂಪ್ಯೂಟರ್ ಜಾಲದಿಂದ ಆ ಆರೂ ಶಾಖೆಗಳನ್ನು ಒಂದಾಗಿಸುವ ಪ್ರಯತ್ನದಿಂದಾಗಿ ಈ ಹೊಸ ಸೇವೆಯನ್ನು ಆರಂಭಿಸಲಾಗಿದೆ. ಇದು ಸಫಲವಾದಲ್ಲಿ ತಂತ್ರಜ್ಞಾನದ ಪೂರ್ಣ ಪ್ರಯೋಜನ ಪಡೆದು ಇನ್ನೂ ಹೆಚ್ಚು ಶಾಖೆಗಳನ್ನು ಕಂಪ್ಯೂಟರ್ ಜಾಲದಲ್ಲಿ ಒಂದಾಗಿಸಿ 'ಯಾವುದೇ ಶಾಖೆಯಲ್ಲಿ ಬ್ಯಾಂಕಿಂಗ್' ಸೌಲಭ್ಯ ಕಲ್ಪಿಸಿಕೊಡುವ ಮಹದಾಸೆ ವಿಜಯಾ ಬ್ಯಾಂಕಿನದು. ಭಾರತೀಯ ಬ್ಯಾಂಕಿಂಗ್‌ನಲ್ಲಿ ತಂತ್ರಜ್ಞಾನದ ಬಳಕೆಯ ಫಲವಿದು. ವಿಜಯಾ ಬ್ಯಾಂಕು ಈ ಪ್ರಯತ್ನದಲ್ಲಿ ಸಂಪೂರ್ಣ ಯಶಸ್ಸನ್ನು ಕಾಣಲಿ ಹಾಗೂ ತನ್ಮೂಲಕ ಇತರ ಬ್ಯಾಂಕುಗಳಿಗೆ ಮಾದರಿಯಾಗಲಿ.

## ಏಷ್ಯನ್ ತೀರುವೆ ಒಕ್ಕೂಟ (ಎಸಿಯು)

ಏಷ್ಯನ್ ತೀರುವೆ ಒಕ್ಕೂಟದ ಸದಸ್ಯ ರಾಷ್ಟ್ರಗಳು ಈ ವರ್ಷದಿಂದ ಜಾರಿಗೆ ಬರುವಂತೆ ತಮ್ಮ ವ್ಯವಹಾರಗಳನ್ನು ಡಾಲರ್ ರೂಪದಲ್ಲಿ ನಡೆಸಲು ತೀರ್ಮಾನಿಸಿವೆ. ಇದುವರೆಗೂ ಈ ರಾಷ್ಟ್ರಗಳು ತಮ್ಮ ತಮ್ಮ ದೇಶದ ಚಲಾರ್ಥಗಳಲ್ಲಿ ವ್ಯವಹಾರಗಳನ್ನು ನಡೆಸುತ್ತಿದ್ದವು. ಈಗ ಡಾಲರ್ ರೂಪದಲ್ಲಿ ವ್ಯವಹಾರ ನಡೆಸುವುದರಿಂದ ಸದಸ್ಯ ರಾಷ್ಟ್ರಗಳು ತಮ್ಮ ವಾಣಿಜ್ಯ ವ್ಯವಹಾರಗಳಿಗಾಗಿ ಮತ್ತೊಂದು ಸದಸ್ಯ ರಾಷ್ಟ್ರದ ವಾಣಿಜ್ಯ ಬ್ಯಾಂಕೊಂದರಲ್ಲಿ ಎಸಿಯು ಡಾಲರ್ ಖಾತೆಯನ್ನು ತೆರೆಯಲು ಏಷ್ಯನ್ ತೀರುವೆ ಒಕ್ಕೂಟ ಒಪ್ಪಿಗೆ ನೀಡಿದೆ.

## ಟೈಬ್ ಬ್ಯಾಂಕ್

ಅಂತರರಾಷ್ಟ್ರೀಯ ವಿನಿಯೋಜನೆ ಮತ್ತು ವಣಿಕ ಬ್ಯಾಂಕ್ ಆದ ಬಹರೈನ್ ಮೂಲದ ಟೈಬ್ ಬ್ಯಾಂಕ್ ಜಂಟಿ ಉದ್ಯಮವಾಗಿ ಬೆಂಗಳೂರಿನಲ್ಲಿ ವಣಿಕ ಬ್ಯಾಂಕನ್ನು ತೆರೆದಿದೆ. ಈ ಹೊಸ ಉದ್ಯಮದ ಹೆಸರು 'ಟೈಬ್ ಕ್ಯಾಪಿಟಲ್ ಕಾರ್ಪೊರೇಷನ್'. ಭಾರತೀಯ ರಿಸರ್ವ್ ಬ್ಯಾಂಕಿನ ಮಾಜಿ ಗವರ್ನರ್ ಆದ ಶ್ರೀ ಎಂ. ನರಸಿಂಹಂ ಬೆಂಗಳೂರಿನ ಈ ಶಾಖೆಯ ಅಧ್ಯಕ್ಷರು. ಬ್ಯಾಂಕು ತನ್ನ ವ್ಯವಹಾರವನ್ನು ಪ್ರಮುಖವಾಗಿ ವಿನಿಯೋಜನ ಸಲಹೆ ಸೇವೆಗಳಿಗೆ, ಆಸ್ತಿ ವ್ಯವಸ್ಥಾಪನಾ ಕಾರ್ಯಗಳಿಗೆ ಹಾಗೂ ಕಾರ್ಪೊರೇಟ್ ಹಣಕಾಸು ನೀಡಿಕೆಗಳತ್ತ ಕೇಂದ್ರೀಕರಿಸಲಿದೆ. ಸುಮಾರು 400 ಮಿಲಿಯನ್ ಡಾಲರ್‌ನಷ್ಟು ಆಸ್ತಿಗಳನ್ನೂ 100 ಮಿಲಿಯನ್ ಡಾಲರು ಬಂಡವಾಳವನ್ನೂ ಹೊಂದಿರುವ ಟೈಬ್ ಸಮೂಹ ಪ್ರಮುಖವಾಗಿ

ತನ್ನ ಆದಾಯವನ್ನು ಶುಲ್ಕಾಧಾರಿತ ಚಟುವಟಿಕೆಗಳಿಂದ ಪಡೆಯುತ್ತದೆ.

**ಅತ್ಯುತ್ತಮ ಬ್ಯಾಂಕ್**

ಭಾರತೀಯ ಸ್ಟೇಟ್ ಬ್ಯಾಂಕಿಗೆ ಎರಡು ಪ್ರಶಸ್ತಿಗಳು ಕಳೆದ ವರ್ಷದಲ್ಲಿ ಬಂದಿವೆ. 'ಯೂರೋ ಮನಿ' ಎಂಬ ಅಂತರರಾಷ್ಟ್ರೀಯ ಹಣಕಾಸು ಪತ್ರಿಕೆ (ಲಂಡನ್‌ನಿಂದ ಪ್ರಕಟಿತ) ಭಾರತೀಯ ಸ್ಟೇಟ್ ಬ್ಯಾಂಕನ್ನು 'ಅತ್ಯುತ್ತಮ ಸ್ವದೇಶಿ ಬ್ಯಾಂಕು' ಎಂದು ಪರಿಗಣಿಸಿದೆ. ಇದರ ಜೊತೆಗೆ ಹಾಂಗ್‌ಕಾಂಗ್‌ನಿಂದ ಪ್ರಕಟವಾಗುವ 'ಏಷ್ಯಾ ಮನಿ' ಎಂಬ ಪತ್ರಿಕೆ ಭಾರತದಲ್ಲಿರುವ ವಾಣಿಜ್ಯ ಬ್ಯಾಂಕುಗಳ ಪೈಕಿ ಭಾರತೀಯ ಸ್ಟೇಟ್ ಬ್ಯಾಂಕನ್ನು 'ವರ್ಷದ ವಾಣಿಜ್ಯ ಬ್ಯಾಂಕು' ಎಂದು ಆಯ್ಕೆ ಮಾಡಿದೆ. ಈ ಪ್ರಶಸ್ತಿ/ಆಯ್ಕೆಗಳ ಮಾನದಂಡ ಹಲವಾರು ಅಂಶಗಳನ್ನು ಹೊಂದಿರುತ್ತದೆ. ವ್ಯವಸ್ಥಾಪನ ಸಾಮರ್ಥ್ಯ, ಲಾಭಪ್ರದತೆ, ಸ್ಪರ್ಧಾತ್ಮಕ ಗುಣ, ಮಧ್ಯಸ್ಥಗಾರಿಕೆ ಚ್ಯುತಿ ಸವಾಲನ್ನು ಎದುರಿಸುವ ಸಾಮರ್ಥ್ಯ ಇತ್ಯಾದಿ ಹೆಸರಿಸಲು ಕೆಲವು. ಭಾರತೀಯ ಸ್ಟೇಟ್ ಬ್ಯಾಂಕ್ ಇನ್ನೂ ಬೆಳೆಯಲಿ ಎಂದು ಆಶಿಸೋಣ.

**ಬಂಡವಾಳ ಪರ್ಯಾಪ್ತತೆ ಅನುಪಾತ**

ನರಸಿಂಹಂ ಸಮಿತಿ ಶಿಫಾರಸ್ಸುಗಳನ್ನು ಅಂಗೀಕರಿಸಿದ ನಂತರ ಬಂಡವಾಳ ಪರ್ಯಾಪ್ತತೆ ಅನುಪಾತ ಶೇ. 10ಕ್ಕಿಂತ ಹೆಚ್ಚಿಗೆ ಹಾಗೂ ಶೇ. 5ಕ್ಕಿಂತ ಕಡಿಮೆ ಇರುವ ಬ್ಯಾಂಕುಗಳು. [ರಿಸರ್ವ್ ಬ್ಯಾಂಕ್ ನಿರ್ದೇಶನದ ಪ್ರಕಾರ ಬ್ಯಾಂಕುಗಳ ಬಂಡವಾಳ ಪರ್ಯಾಪ್ತತೆ ಮಾರ್ಚ್ 1996ರ ಅಂತ್ಯದಲ್ಲಿ ಶೇ. 8 ಇರಬೇಕು]

| | | | ಶೇ. |
|---|---|---|---|
| 1 | ಓರಿಯಂಟಲ್ ಬ್ಯಾಂಕ್ ಆಫ್ ಕಾಮರ್ಸ್ | — | 18.69 |
| 2 | ಭಾರತೀಯ ಸ್ಟೇಟ್ ಬ್ಯಾಂಕ್ | — | 12.77 |
| 3 | ಕಾರ್ಪೊರೇಶನ್ ಬ್ಯಾಂಕ್ | — | 10.39 |
| 4 | ಸ್ಟೇಟ್ ಬ್ಯಾಂಕ್ ಆಫ್ ಪಾಟಿಯಾಲ | — | 10.00 |
| 1 | ಅಲಹಾಬಾದ್ ಬ್ಯಾಂಕು | — | 4.92 |
| 2 | ಆಂಧ್ರ ಬ್ಯಾಂಕ್ | — | 4.85 |
| 3 | ಸೆಂಟ್ರಲ್ ಬ್ಯಾಂಕ್ ಆಫ್ ಇಂಡಿಯಾ | — | 4.36 |
| 4 | ಸ್ಟೇಟ್ ಬ್ಯಾಂಕ್ ಆಫ್ ಮೈಸೂರು | — | 3.60 |
| 5 | ಸ್ಟೇಟ್ ಬ್ಯಾಂಕ್ ಆಫ್ ಟ್ರಾವಂಕೂರ್ | — | 3.07 |
| 6 | ಯುನೈಟೆಡ್ ಬ್ಯಾಂಕ್ ಆಫ್ ಇಂಡಿಯಾ | — | 2.50 |

**ಬ್ಯಾಂಕ್ ಆಫ್ ಸಿಲೋನ್**

ಶ್ರೀ ಲಂಕಾ ಸರಕಾರದ ಸಂಪೂರ್ಣ ಒಡೆತನದಲ್ಲಿರುವ ಬ್ಯಾಂಕ್ ಆಫ್ ಸಿಲೋನ್ ತನ್ನ ಶಾಖೆಯನ್ನು ಮದರಾಸಿನಲ್ಲಿ ತೆರೆಯಲು ಪರವಾನಗಿ ಪಡೆದಿದೆ. ಈ ಬ್ಯಾಂಕ್ ಅಂತರರಾಷ್ಟ್ರೀಯ ಮಟ್ಟದಲ್ಲಿ ತನ್ನ ಇರುವಿಕೆಯನ್ನು ಹೆಚ್ಚಾಗಿ ಗುರುತಿಸಿಕೊಂಡಿಲ್ಲ. ಈಗ ಭಾರತವನ್ನು ಹೊರತುಪಡಿಸಿ ಈ ಬ್ಯಾಂಕ್ ಶ್ರೀಲಂಕಾದಿಂದ ಹೊರಗೆ ತನ್ನ ಶಾಖೆಗಳನ್ನು ಕೇವಲ ಎರಡು ದೇಶಗಳಲ್ಲಿ ಮಾತ್ರ ತೆರೆದಿದೆ : ಲಂಡನ್ನಿನಲ್ಲೊಂದು ಹಾಗೂ ಮಾಲೆಯಲ್ಲಿ ಮತ್ತೊಂದು. ವ್ಯಾಪಾರ ಹಣಕಾಸಿನ ಬಗ್ಗೆ ಪ್ರಮುಖವಾಗಿ ತನ್ನ ಚಟುವಟಿಕೆಯನ್ನು ಕೇಂದ್ರೀಕರಿಸುವ ಉದ್ದೇಶ ಹೊಂದಿದೆ. ಅಲ್ಲದೆ ಬ್ಯಾಂಕಿಂಗ್‌ನ ಇತರ ಸೌಲಭ್ಯಗಳನ್ನೂ ಅದು ಇಲ್ಲಿನ ತನ್ನ ಶಾಖೆಯಲ್ಲಿ ನೀಡಲಿದೆ. ಆರಂಭದಲ್ಲಿ ಡಾಲರ್ 10 ಮಿಲಿಯನ್ ಬಂಡವಾಳವನ್ನು ಈ ಬ್ಯಾಂಕ್ ಶಾಖೆ ಹೊಂದಿರುತ್ತದೆ. ಶಾಖೆಯು ಬ್ಯಾಂಕಿಂಗ್ ವ್ಯವಹಾರದಲ್ಲಿ ಸಫಲವಾದರೆ ಇನ್ನು ಕೆಲವು ವರ್ಷಗಳಲ್ಲಿ ಬೆಂಗಳೂರು ಹಾಗೂ ಬಾಂಬೆ ನಗರಗಳಲ್ಲೂ ಶಾಖೆಗಳನ್ನು ತೆರೆಯುವ ಯೋಜನೆ ಹಾಕಿಕೊಂಡಿದೆ.

**ಹತ್ತು ಲಕ್ಷಕ್ಕೆ ಮೀರಿದ ವ್ಯವಹಾರಗಳು**

ಭಾರತೀಯ ರಿಸರ್ವ್ ಬ್ಯಾಂಕು ಎಲ್ಲಾ ವಾಣಿಜ್ಯ ಬ್ಯಾಂಕುಗಳಲ್ಲಿ ನಡೆಯುವ ರೂ. ಹತ್ತು ಲಕ್ಷಕ್ಕೆಮೀರಿದ ನಗದು ವ್ಯವಹಾರಗಳನ್ನು ತನಗೆ ಒದಗಿಸಬೇಕೆಂಬ ಸೂಚನೆಯನ್ನು ಇತ್ತೀಚೆಗೆ ಎಲ್ಲಾ ವಾಣಿಜ್ಯ ಬ್ಯಾಂಕುಗಳಿಗೂ ನೀಡಿದೆ. ಗ್ರಾಹಕರ ಖಾತೆಯಲ್ಲಿ ಪ್ರಶ್ನಾರ್ಹವಾದ ಹಾಗೂ ಸಂದೇಹಾಸ್ಪದವಾದ ವ್ಯವಹಾರಗಳು ನಡೆಯುತ್ತಿದೆ ಎಂಬ ಶಂಕೆಯೇ ಈ ಹೊಸ ನಿದರ್ಶನಕ್ಕೆ ಮುಖ್ಯ ಕಾರಣವಾಗಿದೆ. ಖಾತೆಗೆ ಹಣ ಜಮಾ ಮಾಡುವಾಗ ಅಥವಾ ಹಣ ಹಿಂಪಡೆಯುವಾಗ ಆಯಾ ಶಾಖೆಗಳು ಆ ಖಾತೆಗಳ ಪೂರ್ಣ ವಿವರಗಳನ್ನು ಶಾಖೆಗಳು ತಮ್ಮ ವಲಯ ಕಛೇರಿಗಳ ಮೂಲಕ ಪ್ರಧಾನ ಕಛೇರಿಗಳಿಗೆ ಕಳಿಸಬೇಕು. ಪ್ರಧಾನ ಕಛೇರಿಯಲ್ಲಿ ಇದಕ್ಕಾಗಿಯೆ ಹೊಸ ದಾಖಲಾತಿ ಪುಸ್ತಕವನ್ನು ತೆಗೆಯಬೇಕು ಹಾಗೂ ರಿಸರ್ವ್ ಬ್ಯಾಂಕಿನ ಅಧಿಕಾರಿಗಳಿಗೆ ಅದನ್ನು ಒದಗಿಸಿಕೊಡಬೇಕು.

**ಐ. ಸಿ. ಐ. ಸಿ. ಐ ಬ್ಯಾಂಕ್**

ಐ. ಸಿ. ಐ. ಸಿ. ಐ ಬ್ಯಾಂಕಿಂಗ್ ಕಾರ್ಪೊರೇಷನ್ ನಿಯಮಿತ ತನ್ನ ಕಾರ್ಪೊರೇಟ್ ಗ್ರಾಹಕರಿಗೆ ತಮ್ಮ ವ್ಯವಹಾರದ ಲೆಕ್ಕಗಳನ್ನು ಬ್ಯಾಂಕ್ ಖಾತೆ ಪುಸ್ತಕದೊಂದಿಗೆ ಸಮನ್ವಯಗೊಳಿಸುವಲ್ಲಿ ನೆರವಾಗುವಂತಹ ಹೊಸ ತಾಂತ್ರಿಕಾಂಶವನ್ನು (software) ವೃದ್ಧಿಪಡಿಸಿದೆ. ಬ್ಯಾಂಕು ಗ್ರಾಹಕ ಖಾತೆಯ ಲೆಕ್ಕವನ್ನು ಕಂಪ್ಯೂಟರ್ ಫ್ಲಾಪಿ ಚಕ್ರದಲ್ಲಿ ನಮೂದಿಸಿ ಗ್ರಾಹಕರಿಗೆ ಒದಗಿಸುತ್ತದೆ. ಗ್ರಾಹಕ ಸಂಸ್ಥೆಯ ಕಂಪ್ಯೂಟರ್ ಈ ಲೆಕ್ಕಗಳನ್ನು ಅಲ್ಲಿರುವ ತಾಂತ್ರಿಕಾಂಶದ ಸಹಾಯದಿಂದ ತನ್ನ ಖಾತೆಯ ಲೆಕ್ಕದೊಂದಿಗೆ ಸಮನ್ವಯಗೊಳಿಸುತ್ತದೆ. ನಂತರ ಲೆಕ್ಕ ತಃಖ್ತೆಯನ್ನು ಮುದ್ರಿಸಬಹುದಾಗಿದೆ.

**ಗ್ರಾಮೀಣ ಬ್ಯಾಂಕುಗಳು**

ನಬಾರ್ಡ್ ಪ್ರಕಟಿಸಿರುವ ಒಂದು ವರದಿಯ ಪ್ರಕಾರ ದೇಶದಲ್ಲಿರುವ ಒಟ್ಟು 173 ಗ್ರಾಮೀಣ ಬ್ಯಾಂಕುಗಳ ನಷ್ಟ ರೂ. 1,660

ಕೋಟಿಯಷ್ಟಾಗಿದೆ. ಈ ವರ್ಷದಿಂದ ಗ್ರಾಮೀಣ ಬ್ಯಾಂಕುಗಳನ್ನೂ Prudential Accounting Norms ವ್ಯಾಪ್ತಿಗೆ ಒಳಪಡಿಸಲಾಗುವುದು. ಇದರಿಂದಾಗಿ ನಷ್ಟದ ಬಾಬ್ತು ಇನ್ನಷ್ಟು ಹೆಚ್ಚಾಗಬಹುದು. ಈ ನಷ್ಟದ ಪರಿಣಾಮವನ್ನು ಕಡಿಮೆ ಮಾಡಲು ಗ್ರಾಮೀಣ ಬ್ಯಾಂಕುಗಳನ್ನೂ ವಾಣಿಜ್ಯ ಬ್ಯಾಂಕುಗಳಂತೆಯೆ ಬೇರೆ ಬೇರೆ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳಲು ಅವಕಾಶ ಕಲ್ಪಿಸಿ ಕೊಡಲಾಗಿದೆ.

### ಬ್ಯಾಂಕುಗಳಿಗೆ ಹಣಕಾಸು ಸ್ವಾಯತ್ತತೆ

ಬಹಳ ಕಾಲದಿಂದಲೂ ಬ್ಯಾಂಕುಗಳು ತಮ್ಮ ಕಲಾಪಗಳಲ್ಲಿ ಆರ್ಥಿಕ ಸ್ವಾಯತ್ತತೆಯನ್ನು ನೀಡಬೇಕೆಂದು ಕೇಂದ್ರ ಸರ್ಕಾರವನ್ನು ಕೇಳುತ್ತಲೇ ಬಂದಿದ್ದವು. ಉದಾರೀಕರಣದ ಫಲವಾಗಿ ಎಲ್ಲ ರಂಗಗಳಲ್ಲೂ ಅದರಲ್ಲೂ ಪ್ರಮುಖವಾಗಿ ಆರ್ಥಿಕರಂಗದಲ್ಲಿ ವ್ಯಾಪಕ ಬದಲಾವಣೆಗಳೂ ಸುಧಾರಣೆಗಳೂ ಆಗಿರುವುದರಿಂದ ಬ್ಯಾಂಕುಗಳ ಈ ಬೇಡಿಕೆ ಸಮಂಜಸವೆನಿಸಿದ್ದರಿಂದ ಕೇಂದ್ರ ಸರ್ಕಾರ ಈಗ ಬ್ಯಾಂಕುಗಳ ಕಲಾಪಗಳಲ್ಲಿ ಆರ್ಥಿಕ ಸ್ವಾಯತ್ತತೆಯನ್ನು ನೀಡಲು ತತ್ವಶಃ ಒಪ್ಪಿದೆ. ಈ ಬಗ್ಗೆ ಕೂಲಂಕಷವಾಗಿ ಅಭ್ಯಾಸಮಾಡಲು, ಈ ಸ್ವಾಯತ್ತತೆ ಯಾವ ಮಟ್ಟದಲ್ಲಿರಬೇಕು ಎಂದು ನಿರ್ಧರಿಸಲು ಮೂವರು ಸದಸ್ಯರ ಕಮಿಟಿಯೊಂದನ್ನು ಸ್ಥಾಪಿಸಲಾಗಿದೆ. ಆರ್ಥಿಕ ಮಂತ್ರಾಲಯದ ವ್ಯಾಪ್ತಿಗೆ ಈ ಕಮಿಟಿ ಸೇರಿರುತ್ತದೆ. ಭಾರತೀಯ ಬ್ಯಾಂಕುಗಳ ಒಕ್ಕೂಟದ ಸಹಾಯವನ್ನು ಈ ಕಮಿಟಿ ಕೇಳಿದೆ. ಆರ್ಥಿಕ ಮಂತ್ರಾಯದಲ್ಲಿ ಬ್ಯಾಂಕಿಂಗ್‌ಗೆ ಸಂಬಂಧಿಸಿದಂತೆ ಕಾರ್ಯದರ್ಶಿಯಾಗಿರುವ ಶ್ರೀ ಡಾ. ವೈ. ವಿ. ರೆಡ್ಡಿ ಈ ಕಮಿಟಿಯ ಅಧ್ಯಕ್ಷರಾಗಿರುತ್ತಾರೆ.

### ಹೊಸ ಉದರಿ ಬಿಡುಗಡೆ ವ್ಯವಸ್ಥೆ

ಭಾರತೀಯ ರಿಸರ್ವ್ ಬ್ಯಾಂಕು ಬ್ಯಾಂಕಿನಿಂದ ಪಡೆದ ಗರಿಷ್ಠ ಅಂಗೀಕಾರ್ಹ ಸಾಲ ಮಿತಿ ರೂ. 20 ಕೋಟಿ ಹಾಗೂ ಅಧಿಕವಾಗಿದ್ದಲ್ಲಿ ಅಂತಹ ಸಾಲವನ್ನು ನಗದು ಉದರಿ ಹಾಗೂ ಸಾಲವೆಂಬ ಎರಡು ಉಪಾಂಗಗಳ ರೂಪದಲ್ಲಿ ಸಾಲಗಾರರಿಗೆ ಬಟವಾಡೆ ಮಾಡಬೇಕೆಂದು ಆದೇಶ ನೀಡಿದೆ. ಈ ಹೊಸ ಉದರಿ ಬಿಡುಗಡೆ ವ್ಯವಸ್ಥೆಯಲ್ಲಿ ಗರಿಷ್ಠ ಅಂಗೀಕಾರ್ಹ ಸಾಲದ ಮಿತಿಯ ಶೇ. 60 ರಷ್ಟನ್ನು ನಗದು ಉದರಿಯಾಗಿಯೂ ಉಳಿದ ಶೇ. 40ರಷ್ಟನ್ನು ಸಾಲದ ರೂಪದಲ್ಲಿಯೂ ನೀಡಲು ಕೇಂದ್ರ ಬ್ಯಾಂಕ್ ಆದೇಶ ನೀಡಿದೆ. ನಗದು ಉದರಿಯಲ್ಲಿ ಎದುರಾಗುವ ನಿಧಿ ವ್ಯವಸ್ಥಾಪನಾ ಹೊರೆಣೆಗಾರಿಕೆಯನ್ನು ಬ್ಯಾಂಕುಗಳಿಂದ ಸಾಲಗಾರರಿಗೆ ವರ್ಗಾಯಿಸುವುದೇ ಈ ಹೊಸ ಉದರಿ ಬಿಡುಗಡೆ ವ್ಯವಸ್ಥೆಯ ಮುಖ್ಯ ಉದ್ದೇಶ.

## ಪ್ರಧಾನ ಮಂತ್ರಿಗಳ ರೋಜ್‌ಗಾರ್ ಯೋಜನೆ

[20ನೇ ಪುಟದಿಂದ ಮುಂದುವರಿದುದು]

ತ್ತದೆ. ಇದು ಸಾಲದ ಸಮರ್ಪಕ ಮರುಪಾವತಿಯನ್ನು ಉತ್ತೇಜಿಸುತ್ತದೆ.

ಈ ಯೋಜನೆಗೆ ನಬಾರ್ಡ್‌ನಿಂದ ಪುನರ್ಧನ ಸೌಲಭ್ಯವೂ ಠೇವಣಿ ವಿಮೆ ಮತ್ತು ಉದರಿ ಖಾತರಿ ನಿಗಮದಿಂದ ಉದರಿ ವಿಮಾ ಸೌಲಭ್ಯವೂ ಸಿಗುತ್ತವೆ.

**ಗುರಿ**: 93-94ರಲ್ಲಿ ರಾಷ್ಟ್ರದ ಗುರಿ 40,000 ಫಲಾನುಭವಿಗಳು, ಕರ್ನಾಟಕದಲ್ಲಿ 2,050. 94-95ರಲ್ಲಿ ರಾಷ್ಟ್ರದ ಗುರಿ 2,21,140 ಫಲಾನುಭವಿಗಳು, ಕರ್ನಾಟಕದಲ್ಲಿ 10,100.

93–94ರಲ್ಲಿ ಬರೀ ನಗರ ಪ್ರದೇಶಗಳಿಗೆ ಸೀಮಿತವಾಗಿದ್ದ ಈ ಯೋಜನೆಯು 94–95ರಿಂದ ಗ್ರಾಮೀಣ ಪ್ರದೇಶಗಳಿಗೂ ಅನ್ವಯಿಸುತ್ತದೆ. ಈಗ ಈ ಯೋಜನೆಯತ್ತ ಕೆಲವು ಒಳನೋಟವನ್ನು ಹರಿಸೋಣ.

1 ಆರಂಭದಲ್ಲಿ ವಿವರಿಸಲಾದ 3 ಹಳೆಯ ಯೋಜನೆಗಳು ಸಾಲ ಮರುಪಾವತಿ ಸರಿಯಾಗಿಲ್ಲದ ಕಾರಣ ವಿಫಲವಾದವೆಂದು ಹೇಳಬಹುದು. ಹಾಗಾಗಿ, ಈ ಯೋಜನೆಯೂ ಅದೇ ಜಾಡು ಹಿಡಿಯದ ಹಾಗೆ ನೋಡಿಕೊಳ್ಳಬೇಕು. ಏಕೆಂದರೆ ಈ ಹಾದಿ ಮುಂದೆ ಬ್ಯಾಂಕಿನ ಲಾಭಪ್ರದತೆಯನ್ನು ಕುಂಠಿತಗೊಳಿಸಿ, ಇನ್ನೂ ಗಂಭೀರ ಸ್ವರೂಪದ ಅಪಾಯುಗಳನ್ನು ತಂದೊಡ್ಡಬಹುದು.

2 ಸಾಲ ಕೊಡುವ ಯೋಜನೆಯನ್ನು ಸರ್ಕಾರ ಯೋಚಿಸಿ, ಅರ್ಹ ಅಭ್ಯರ್ಥಿಗಳನ್ನು ಜಿಲ್ಲಾ ಸಮಿತಿ ಆರಿಸಿದ ಮೇಲೆ ಬರೀ ಸಾಲ ಕೊಡುವ ಕೆಲಸ ಮಾತ್ರ ಇಂದು ಬ್ಯಾಂಕಿಗೆ ಉಳಿದಿದೆ. ಇದರ ಬದಲು ಅರ್ಹ ಅಭ್ಯರ್ಥಿಗೆ ಸಾಲ ಕೊಡುವ ನಿರ್ಣಯವನ್ನು ತೆಗೆದುಕೊಳ್ಳುವ ಸ್ವಾತಂತ್ರ್ಯವನ್ನು ಬ್ಯಾಂಕಿಗೇ ಕೊಟ್ಟರೆ ಯಾವುದೇ ಯೋಜನೆಯ ಗುಣಾವಗುಣಗಳು, ಲಾಭಪ್ರದತೆ, ಮುಂತಾದುವನ್ನು ತುಲನೆ ಮಾಡಿ, ನಂತರ ಕೊಡುವ ಸಾಲ ಸರಿಯಾಗಿ ಮರುಪಾವತಿಯಾದರೆ, ಅದರಿಂದ ಸಾಲಗಾರ ಹಾಗೂ ಬ್ಯಾಂಕ್ ಇಬ್ಬರಿಗೂ ಹಣಕಾಸಿನ ಸ್ಥಿರತೆಯುಂಟಾಗುತ್ತದೆ.

3 ಈಗಿರುವ ಸಹಾಯಧನ ಹಿಂದಿನ ಯೋಜನೆಗಳಿಗೆ ಹೋಲಿಸಿದರೆ ಶೇ. 25 ಕಡಿಮೆ. ಹಾಗಾಗಿ ಇದನ್ನು ಹೆಚ್ಚಿಸುವ ಮತ್ತು ಬ್ಯಾಂಕುಗಳಿಗೆ ಸಕಾಲದಲ್ಲಿ ಸರ್ಕಾರದಿಂದ ಸಹಾಯಧನವನ್ನು ಕಳಿಸುವ ಏರ್ಪಾಡಾಗಬೇಕಾಗುತ್ತದೆ.

4 ಒಂದು ಕುಟುಂಬದ ಒಬ್ಬ ವ್ಯಕ್ತಿಗೆ ಮಾತ್ರ ಎಂದು ಹೇಳಿದರೂ, ಈಗಿನ ಬದಲಾದ ಕುಟುಂಬ ವ್ಯವಸ್ಥೆಯಲ್ಲಿ ಇತರರಿಗೂ ಈ ಸಾಲ ಸೌಲಭ್ಯ ನೀಡುವ ಅವಕಾಶವನ್ನು ಕಲ್ಪಿಸಿಕೊಡಬೇಕು.

5 ಬರೀ ವಿದ್ಯಾವಂತರಲ್ಲದೆ ಅವಿದ್ಯಾವಂತರು, ನಿರಕ್ಷರಿಗಳು ಎಲ್ಲರನ್ನು ಸೇರಿಸಿ, ಇಡೀ ಸಮಗ್ರ ಭಾರತದ ಎಲ್ಲಾ ಸ್ತರದ ಜನರಿಗೂ ಅನ್ವಯವಾಗುವಂತಹ ಯೋಜನೆಯನ್ನು ರೂಪಿಸುವ ಆವಶ್ಯಕತೆಯಿದೆ.

ಈ ಯೋಜನೆಯಿಂದ ಭಾರತದ ಆರ್ಥಿಕ ವ್ಯವಸ್ಥೆಯ ಮೇಲೆ ಬಹು ದೊಡ್ಡ ಭಾರ ಬೀಳುವ ಸಂಭವವಿದೆಯಾದರೂ, ಈಗಿನ ಸಾಮಾಜಿಕ ಬೇಡಿಕೆ, ಆವಶ್ಯಕತೆಗಳಿಗೆ ತಕ್ಕಂತೆ ಕಾಲಕಾಲಕ್ಕೆ ಸಮರ್ಪಕವಾದ ಯೋಜನೆಗಳನ್ನು ರೂಪಿಸಿಕೊಂಡು, ಸಾಕಷ್ಟು ಎಚ್ಚರಿಕೆಯಿಂದ ಹೆಜ್ಜೆಯಿಟ್ಟಲ್ಲಿ ಭಾರತವೂ ಹೆಚ್ಚಿನ ಅಭಿವೃದ್ಧಿ ಸಾಧಿಸಬಹುದು.

R. N. 36702/83



PRINTED BY G. H. KRISHNAMURTHY, MYSORE PRINTING AND PUBLISHING HOUSE, ASHOKA ROAD. MYSORE 570001